# ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ರಾಮ್‌ಪ್ರಸಾದ್ ಡಿ.ಆರ್.

ಮಾರ್ಗದರ್ಶಕರು

ಡಾ। ನಾ. ದಾಮೋದರ ಶೆಟ್ಟಿ



೨೦೧೦

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ, ಮಂಗಳೂರು

# ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆ



ಕನ್ನಡ ವಿಶ್ವವಿದ್ಯಾಲಯ, ಹಂಪಿ

ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ರಾಮ್‌ಪ್ರಸಾದ್ ಡಿ.ಆರ್.

ಮಾರ್ಗದರ್ಶಕರು

ಡಾ। ನಾ. ದಾಮೋದರ ಶೆಟ್ಟಿ

೨೦೧೦

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ

ಬಲ್ಮಠ ಮಂಗಳೂರು



# ಯೋಗ್ಯತಾ ಪತ್ರ

ರಾಮ್‌ಪ್ರಸಾದ್ ಡಿ. ಆರ್. ರವರ

**ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆ**

ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮ, ಅಭಿಪ್ರಾಯ ಸಂಗ್ರಹ, ಬೋಧನೆ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಕರ್ನಾಟಕ ಥಿಯೋಲಾಜಿಕಲ್
ಸಂಶೋಧನ ಕೇಂದ್ರ

ಬಲ್ಮಠ ಮಂಗಳೂರು.

ಡಾ। ನಾ. ದಾಮೋದರ ಶೆಟ್ಟಿ

ಸಂಶೋಧನ ಮಾರ್ಗದರ್ಶಕರು

# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಎಂ.ಫಿಲ್. ಪದವಿಗಾಗಿ ಸಾದರಪಡಿಸಿದ ರಾಮ್‌ಪ್ರಸಾದ್ ಡಿ. ಆರ್. ರವರ "ಕುವೆಂಪು ಕಾದಂಬರಿಗಳ ಆಧುನಿಕತೆ" ಎಂಬ ಶೀರ್ಷಿಕೆಯ ಈ ಸಂಪ್ರಬಂಧವು ಈ ಸಂಶೋಧಕರ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದಿಂದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರದ ಡಾ। ನಾ. ದಾಮೋದರ ಶೆಟ್ಟಿ ಅವರ ಮಾರ್ಗದರ್ಶನದಲ್ಲಿ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

ರಾಮ್‌ಪ್ರಸಾದ್ ಡಿ. ಆರ್.

ಕರ್ನಾಟಕ ಥಿಯೋಲಾಜಿಕಲ್
ಸಂಶೋಧನ ಕೇಂದ್ರ

ಬಲ್ಮಠ ಮಂಗಳೂರು.

## ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆ
## ಅನುಕ್ರಮಣಿಕೆ ಪುಟಸಂಖ್ಯೆ


ಶೀರ್ಷಿಕೆ

**ಅಧ್ಯಾಯ – ೧** ೧–೧೦

೧.೧ ಪ್ರಸ್ತಾವನೆ

೧.೨ ವಸಾಹತುಶಾಹಿ ಹಿನ್ನೆಲೆ

**ಅಧ್ಯಾಯ –೨** ೧೧–೪೧

**೨ ಪುರೋಗಾಮಿ ಚಿಂತನೆಗಳು**

೨.೧ ಕಾನೂರು ಹೆಗ್ಗಡಿತಿ

೨.೨ ತೆರ (ವಧುದಕ್ಷಿಣೆ)

೨.೩ ರೇಷ್ಮೆ ಖಾಯಿಲೆ

೨.೪ ತಾಯತ

೨.೫ ಹೊಸ ಶಿಕ್ಷಣ

೨.೬ ಜಾತ್ಯಾತೀತತೆ

೨.೭ ಕನಸು

೨.೮ ಹೂವಯ್ಯನ ಮಾನವೀಯತೆ

೨.೯ ಸಂಶಯ

೨.೧೦ ಇಂಗ್ಲೀಷ್ ಪ್ರವೇಶ

೨.೧೧ ಸಿದ್ದೆಗುಮ್ಮ (ಹೂದಲು ಹಾಕುವುದು)

೨.೧೨ ಕಾನೂರು ಮನೆ ಪಾಲಾಗುವುದು

೨.೧೩ ಹೂವಯ್ಯ ಊರು ಬಿಟ್ಟದ್ದು

೨.೧೪ ಮನೋ ವೈಜ್ಞಾನಿಕತೆ

೨.೧೫ ಪೋಲೀಸ್ ಪ್ರವೇಶ

೨.೧೬ ಕೋಳಿ ಅಂಕ

೨.೧೭ ನಂಬಿಕೆಗಳು

೨.೧೮ ಹೂವಯ್ಯನ ಪ್ರತಿಜ್ಞೆ

೨.೧೯ ಹತ್ತು ವರ್ಷಗಳಾದ ಮೇಲೆ

೨.೨೧ ಮಲೆಗಳಲ್ಲಿ ಮದುಮಗಳು

೨.೨೨ ನಂಬಿಕೆ

೨.೨೩ ಪುರೋಹಿತ ವರ್ಗ

೨.೨೪ ಆಧುನಿಕತೆ ಪರಿಣಾಮ

೨.೨೫ ವಿದ್ಯಾಭ್ಯಾಸ

೨.೨೬ ಅಶ್ಲೀಲತೆ

೨.೨೭ ಪುರೋಗಾಮಿ ಅಂಶ

೨.೨೮ ದೇವಯ್ಯನಲ್ಲಾದ ಬದಲಾವಣೆ

೨.೨೯ ವ್ಯತಿರಿಕ್ತ ಭಾವನೆಗಳು

೨.೩೦ ಕಾಮ

**ಅಧ್ಯಾಯ ೩** ೪೨–೪೬

**<u>ಕುವೆಂಪು ಕಾದಂಬರಿಗಳಲ್ಲಿ ಬೇಟೆ</u>**

೩.೧ ಬೇಟೆ ಬೆಳೆದು ಬಂದ ದಾರಿ

೩.೨ ಬೇಟೆಗಾರನ ಅರ್ಹತೆಗಳು

೩.೩ ಮೀನುಬೇಟೆ

೩.೪ ಕಾಡುಕೋಳಿ ಬೇಟೆ
೩.೫ ಕಾಡುಹಂದಿ ಬೇಟೆ
೩.೬ ಕಣೆಹಂದಿ ಬೇಟೆ
೩.೭ ಜೇನು ಬೇಟೆ
೩.೮ ಹುಲಿ ಬೇಟೆ

**ಅಧ್ಯಾಯ ೪** ೪೭–೫೯

**೪.** ಕ್ರೈಸ್ತರ ಆಗಮನ

೪.೧ ಯಂತ್ರನಾಗರಿಕತೆ ಪ್ರವೇಶ
೪.೨ ಬೈಸಿಕಲ್ ಕಲಿಯುವ ಬಗೆ
೪.೩ ಧರ್ಮ ಪ್ರಚಾರ
೪.೪ ಪೂಜೆ
೪.೫ ಶಿಕ್ಷಣ
೪.೬ ವಿವಾಹ ವಿಚ್ಛೇದನ
೪.೭ ಕಾಫಿ ಪ್ರವೇಶ
೪.೮ ಮುಸ್ಲಿಮರ ಆಗಮನ

**ಅಧ್ಯಾಯ ೫** ೬೦–೬೬

**೫.** ಸ್ತ್ರೀಯರು

೫.೧ ದುರಂತಕ್ಕೊಳಗಾದ ಸ್ತ್ರೀಯರು
೫.೨ ಪ್ರೀತಿ ಪ್ರಣಯ
೫.೩ ಚಿನ್ನಮ್ಮನ ಧೈರ್ಯ
೫.೪ ಮುಂದಾಲೋಚನೆ
೫.೫ ಕೂಡಿಕೆ
೫.೬ ಅಭ್ಯಂಜನ ಸ್ನಾನ
೫.೭ ಹಚ್ಚೆ ಹಾಕಿಕೊಳ್ಳುವುದು
೫.೮ ಉಂಗುರ

**ಅಧ್ಯಾಯ ೬** ೬೭–೭೬

**೬.** **ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ**

೬.೧ ಅಸ್ಪೃಶ್ಯತೆ
೬.೨ ಬಂಡಾಯ
೬.೩ ಒಡೆತನ (ಅಸ್ತಿತ್ವ)
೬.೪ ಸರಕುಗಳು
೬.೫ ಲೈಂಗಿಕತೆ

**ಅಧ್ಯಾಯ ೭** ೭೭–೮೬

**೭** **ಕುವೆಂಪು ಕಾದಂಬರಿಗಳಲ್ಲಿ ಮಾನವೀಯ ಅಂಶಗಳು**

೭.೧ ಪ್ರಕೃತಿ ಆರಾಧನೆ
೭.೨ ಭಕ್ತಿ
೭.೩ ಪ್ರಾರ್ಥನೆಯ ಫಲ
೭.೪ ಹಿಂದೂ ಧರ್ಮದರ್ಶನ
೭.೫ ಅಹಿಂಸೆ
೭.೬ ಆತ್ಮ

**ಫಲಿತಗಳು** ೮೭–೯೧
**ಅನುಬಂಧ** ೯೨–೯೩
**ಪರಾಮರ್ಶನ ಗ್ರಂಥಗಳು** ೯೪–೯೫

# ಅಧ್ಯಾಯ-೧

# ಕುವೆಂಪು ಕಾದಂಬರಿಗಳಲ್ಲಿ ಆಧುನಿಕತೆ

**ಪ್ರಸ್ತಾವನೆ:**

ಆಧುನಿಕತೆ ಎಂಬ ಪರಿಕಲ್ಪನೆ ಮನುಷ್ಯನ ನಾಗರಿಕತೆಯ ಬೆಳವಣಿಗೆಯನ್ನು ಸೂಚಿಸುತ್ತದೆ. ಪ್ರತಿ ಹಂತದಲ್ಲೂ ಮನುಷ್ಯ ಬೆಳವಣಿಗೆ ಹೊಂದುತ್ತಾ ಅನೇಕ ಅನುಭವಗಳನ್ನು ಪಡೆದು ಹೊಸ ಹೊಸ ಅನ್ವೇಷಣೆ ಮಾಡಲು ತುಡಿಯುತ್ತಾನೆ. ಇದರ ಪರಿಣಾಮವಾಗಿ ಹೊಸದನ್ನು ಹುಟ್ಟು ಹಾಕಲು ಪ್ರಯತ್ನಿಸುತ್ತಾನೆ.

ಆಧುನಿಕತೆ ಎಂಬ ಪ್ರಕ್ರಿಯೆ ಸ್ಥಳದಿಂದ ಸ್ಥಳಕ್ಕೆ ಕಾಲದಿಂದ ಕಾಲಕ್ಕೆ ಬದಲಾವಣೆ ಹೊಂದುತ್ತದೆ. ಆದಿಮಾನವನ ಕಾಲದಿಂದ ಇಂದಿನವರೆಗೆ ಮನುಷ್ಯ ಎಷ್ಟೆಲ್ಲಾ ಬದಲಾವಣೆಗಳನ್ನು ಹೊಂದಿದ್ದಾನೆ, ಹೊಂದುತ್ತಿದ್ದಾನೆ, ಇದಕ್ಕೆ ಮನುಷ್ಯನ ಆವಶ್ಯಕತೆ, ಅನುಕೂಲತೆ, ಬೌದ್ಧಿಕ ಜ್ಞಾನ, ತಾಂತ್ರಿಕ ಜ್ಞಾನ ಮುಂತಾದವುಗಳು ಪೂರಕವೂ ಪೋಷಕವೂ ಆಗಿ ನಿಲ್ಲುತ್ತವೆ.

ಆದಿ ಮಾನವನ ಜೀವನ ಶೈಲಿಗೆ ಇಂದಿನ ಜೀವನವನ್ನು ತುಲನೆ ಮಾಡಿದಾಗ ಬದಲಾವಣೆಯ ಮಹಾಪೂರವನ್ನು ಕಾಣುತ್ತೇವೆ. ಜೀವನ ಹರಿಯುವ ನೀರಿನಂತೆ. ನಿರಂತರವಾಗಿ ಹರಿಯುವುದೇ ಅದರ ನಿಯಮ. ಹತ್ತು ವರ್ಷದ ಹಿಂದೆ ಇದ್ದಂತಹ ಜೀವನ ಶೈಲಿ ಈಗ ಇಲ್ಲ. ಇನ್ನು ಮುಂದೆ ಇಪ್ಪತ್ತೈದು ವರ್ಷದಲ್ಲಿ ನಮ್ಮ ಜೀವನ ಗತಿ ಬಹುಕಾಲ ಬದಲಾವಣೆ ಹೊಂದುವುದರಲ್ಲಿ ಯಾವ ಸಂಶಯವೂ ಇಲ್ಲ. ನಿನ್ನೆಗೆ ಇಂದು ಹೊಸದು. ಇಂದಿಗೆ ನಾಳೆ ಹೊಸದು. ಅಂತೆಯೇ ಆಧುನಿಕತೆ ಕೂಡ. ಒಂದೊಮ್ಮೆ ಮನುಷ್ಯ ಸಂಪರ್ಕವೇ ಇಲ್ಲದಿದ್ದ ಅದೆಷ್ಟೋ ಕಾಡುಮೇಡುಗಳಲ್ಲಿ ಕ್ರಮೇಣ ಮನುಷ್ಯ ವಾಸ ಪ್ರಾರಂಭವಾಗಿ ಕಾಲಕ್ರಮದಲ್ಲಿ ಕಾಡು ಕಡಿದು, ನಾಡುಕಟ್ಟಿ ನಾಗರಿಕತೆಯನ್ನು ಬೆಳೆಸಿದ್ದು ಈಗ ಇತಿಹಾಸ.

ಮಲೆನಾಡಿಗೆ ಆಧುನಿಕತೆ ಪ್ರವೇಶಿಸಿದ್ದೂ ಇದೇ ರೀತಿಯಲ್ಲಿಯೆ. ಬಹುಕಾಲದಿಂದ ಅಲ್ಲಿ ವಾಸಿಸುತ್ತಿದ್ದ ಜನಾಂಗದವರಿಗೆ ಆಧುನಿಕತೆಯ ಸಂಪರ್ಕ ಇರಲಿಲ್ಲ. ನಗರಕ್ಕೆ ಹೋಗಿ ಬರುವುದು, ನಗರದ ವಿದ್ಯಾಭ್ಯಾಸ, ನಗರದ ನಾಗರಿಕತೆ, ಅನ್ಯಧರ್ಮೀಯರ

ಪ್ರವೇಶ ಇತ್ಯಾದಿಗಳೆಲ್ಲ ಮಲೆನಾಡನ್ನು ಹಂತಹಂತವಾಗಿ ಬದಲಾವಣೆಗೆ ಗುರಿಪಡಿಸತೊಡಗಿದುವು. ಕಾಡು ಕಡಿದು ರಸ್ತೆ ಮಾಡಿದಾಗ, ಆ ರಸ್ತೆಯಲ್ಲಿ ಎತ್ತಿನ ಗಾಡಿಯ ಬದಲಿಗೆ ಸೈಕಲ್ ಸಂಚರಿಸತೊಡಗಿದಾಗ ನಾಗರಿಕತೆಯ ಸಂಚಲನ ನಿರ್ಮಾಣವಾಯಿತು. ಹೀಗೆ ಮಲೆನಾಡು ವಿವಿಧ ಕಾರಣಗಳಿಗೆ ಕೇವಲ ಮಲೆನಾಡಾಗಿ ಉಳಿಯಲು ಯಾಕೆ ಸಾಧ್ಯವಾಗಲಿಲ್ಲ; ಅದಕ್ಕೆ 'ಆಧುನಿಕತೆ' ಹೇಗೆ ಕಾರಣವಾಗುತ್ತದೆ ಎಂಬುದನ್ನು ಮುಂದೆ ನೋಡಬಹುದು.

ಕನ್ನಡ ಸಾಹಿತ್ಯ ಜಗತ್ತಿನ ದಿಗ್ಗಜರಲೊಬ್ಬರಾಗಿರುವ ಕುವೆಂಪು (ಕುಪ್ಪಳ್ಳಿ ವೆಂಕಟಪ್ಪ ಪುಟ್ಟಪ್ಪ) ಬರೆದಿರುವ ಕಾದಂಬರಿಗಳು ಸಂಖ್ಯಾ ದೃಷ್ಟಿಯಲ್ಲಿ ಎರಡೇ ಆಗಿದ್ದರೂ ಕನ್ನಡ ಕಾದಂಬರಿ ಲೋಕದ ಮೇರು ಕೃತಿಗಳವು. ಮೊದಲನೆಯದು 'ಕಾನೂರು ಹೆಗ್ಗಡಿತಿ' ಹಾಗೂ ಮುಂದಿನದು 'ಮಲೆಗಳಲ್ಲಿ ಮದುಮಗಳು'.

ಎರಡೂ ಕೃತಿಗಳೂ ಮಲೆನಾಡಿನ ಬದುಕಿಗೆ ವಿವಿಧ ಮಜಲುಗಳನ್ನು ಸೃಷ್ಟಿಸುತ್ತ ಹೋಗುತ್ತವೆ. ಮಲೆಗಳಲ್ಲಿ ಮದುಮಗಳು ಕೃತಿಯೊಳಗೆ ಮುಕುಂದಯ್ಯ, ದೇವಯ್ಯರಂತಹ ಪಾತ್ರಗಳು ಆಧುನಿಕತೆಯ ಸಂಸರ್ಗವನ್ನಿಟ್ಟುಕೊಂಡದ್ದು ಕಾಣಿಸುವುದು. ಕ್ರೈಸ್ತ ಪಾದ್ರಿಗಳ ಪ್ರವೇಶ, ಮತಾಂತರ ಪ್ರಸಂಗ ಇತ್ಯಾದಿಗಳೆಲ್ಲ ಅದೇ ಆಧುನಿಕತೆಯ ಇನ್ನೊಂದು ಮಜಲಾಗಿ ಕಾಣಿಸುತ್ತದೆ.

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಚಂದ್ರಯ್ಯಗೌಡ ನಡೆಸಿಕೊಂಡು ಬಂದ ಯಾಜಮಾನ್ಯ ಹೇಗೆ ಕಾಲಕ್ರಮದಲ್ಲಿ ನೆಲಕಚ್ಚಿ ಹೊಸಲೋಕವೊಂದು ಆವಿಷ್ಕಾರಗೊಳ್ಳುತ್ತದೆ ಎಂಬುದರ ಸವಿಸ್ತಾರ ಕತೆಯಿದೆ.

ಎರಡೂ ಕಾದಂಬರಿಗಳು ಇರುವ ಸ್ಥಿತಿಯನ್ನು ಹೇಳುತ್ತ ನಾಳೆಗಳನ್ನು ಕಟ್ಟುವುದರ ಕಡೆಗೆ ತುಡಿಯುತ್ತವೆ. ಅರ್ಥಾತ್ ಆಧುನಿಕತೆಯ ಕಡೆಗೆ ಹೆಜ್ಜೆ ಹಾಕುತ್ತವೆ.

ಆಧುನಿಕತೆಯ ವಿವಿಧ ಹಂತಗಳು ಕುವೆಂಪು ಬರೆದ ಎರಡೂ ಕೃತಿಗಳಲ್ಲಿ ಬೇರೆ ಬೇರೆ ರೂಪದಲ್ಲಿ ಬಿಂಬಿತವಾಗಿವೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿನ ಆಗುಂಬೆಗೆ ಹೋಗುವ ರಸ್ತೆಯ ಎಡಕಡೆಯಲ್ಲಿರುವ ದೊಡ್ಡದಾದ ಚೌಕಿ ಮನೆಯ ವರ್ಣನೆ ಹಾಗೂ ಅಲ್ಲಿನೆಲೆಗೊಂಡಿರುವ ವ್ಯಕ್ತಿಗಳ ವ್ಯಕ್ತಿತ್ವಗಳನ್ನು ಗಮನಿಸೋಣ:

ಮನೆ ಒಂದಾದರೂ ಅದರ ಕಾಲುಭಾಗಕ್ಕೆ ಊರ ಹೆಂಚು ಹೊದಿಸಿತ್ತು. ಉಳಿದುದಕ್ಕೆ ಅಡಿಕೆ ಸೋಗೆ (ಮ.ಮ. ಪು. ೨೮). ಆ ಮನೆಯಲ್ಲಿ ಎರಡು ಸಂಸಾರಗಳಿದ್ದವು ಎಂಬುದು ಸ್ಪಷ್ಟ. ಸುಬ್ಬಣ್ಣ ಹೆಗ್ಗಡೆಯವರ ಮುಕ್ಕಾಲು ಭಾಗ ಮನೆ ಸೋಗೆಯದಾದ್ದರಿಂದ ಅವರು ಸೋಗೆ ಮನೆಯವರು. ಶಂಕರ ಹೆಗ್ಗಡೆಯವರ ಕಾಲು ಭಾಗ ಮನೆ ಹೆಂಚಿನದಾದ್ದರಿಂದ ಅವರು ಹೆಂಚಿನ ಮನೆಯವರು. ಅಥವಾ ಅವು ದೊಡ್ಡಮನೆ ಮತ್ತು ಸಣ್ಣಮನೆ.

ಸುಬ್ಬಣ್ಣ ಹೆಗ್ಗಡೆಯ ಮಗ ತಿಮ್ಮಪ್ಪ ಹೆಗ್ಗಡೆ. ಆತನಿಗೆ ಶಂಕರ ಹೆಗ್ಗಡೆಯನ್ನು ಕಂಡರಾಗುತ್ತಿರಲಿಲ್ಲ. ಅದಕ್ಕೆ ಕಾರಣ ಆತ 'ಅಚ್ಚ ಕರ್ರಗಿನ ಶಂಕರ ಹೆಗ್ಗಡೆಯದು 'ಬಿಳಿಮೈ' ಬಣ್ಣದವನು. ಆತ 'ಕುಳ್ಳ'. ಶಂಕರ ಹೆಗ್ಗಡೆ 'ಎತ್ತರ'. ಆತನ ಹಲ್ಲು ಯದ್ವಾ ತದ್ವ ಹುಟ್ಟಿ ಹುಳು ಹಿಡಿದಿದೆ. ಶಂಕರ ಹೆಗ್ಗಡೆಯದು ಬೆಳ್ಳಗೆ ಶುಚಿಯಾದ ಹಲ್ಲು. ಆತನದು 'ವಿಕಾರ ಮೆಳ್ಳೆಗಣ್ಣು', ಶಂಕರ ಹೆಗ್ಗಡೆಯದು 'ಚೆಲುವಾದ ಕಣ್ಣು'. ಆತ 'ಕರುಬಿಗೂ ದ್ವೇಷಕ್ಕೂ ಒಳಗಾಗಿದ್ದ ಶಂಕರ ಹೆಗ್ಗಡೆ 'ಬಹಳ ಸಾಮಾನ್ಯ ವ್ಯಕ್ತಿ'.

ಈ ಭಾಗದಲ್ಲಿ ಕಂಡು ಬರುವ ಪಾತ್ರಗಳ ತುಲನೆಯಲ್ಲಿ ತಿಮ್ಮಪ್ಪ ಹೆಗ್ಗಡೆಯ ವ್ಯಕ್ತಿತ್ವ ತೀರ ಹಿನ್ನಡೆ ಸಾಧಿಸಿದ್ದರೆ ಶಂಕರ ಹೆಗ್ಗಡೆ ಆಧುನಿಕತೆಯ ಮಜಲನ್ನು ಏರಿದ್ದು ಕಂಡು ಬರುತ್ತದೆ. ಅರ್ಥಾತ್ ತಿಮ್ಮಪ್ಪ ಹೆಗ್ಗಡೆಯ ಪ್ರತಿಗಾಮಿ ಚಿಂತನೆಯನ್ನು ಹಿಂದೆ ಹಾಕಿ ಶಂಕರ ಹೆಗ್ಗಡೆ ಪುರೋಗಮನವನ್ನು ಸಾಧಿಸಿದ್ದಾರೆ. ಎಲ್ಲ ನೆಲೆಯಲ್ಲೂ ಸ್ತ್ರೀ ಸಮೂಹವನ್ನು ಗುಲಾಮರೆಂದೇ ಪರಿಭಾವಿಸುತ್ತ ಅವರನ್ನು ಕತ್ತೆಗಳಂತೆ ದುಡಿಮೆಗೆ ಹಚ್ಚುತ್ತ ಅವರ ಆಧುನಿಕ ಆಲೋಚನೆಗಳಿಗೆ ಕಣ್ಣ ಪಟ್ಟಿ ಕಟ್ಟಿದ್ದಾರೆ. ತಿಮ್ಮಪ್ಪ ಹೆಗ್ಗಡೆ ಹಾಗೂ ಸುಬ್ಬಣ್ಣ ಹೆಗ್ಗಡೆ, ಆದರೆ ಶಂಕರ ಹೆಗ್ಗಡೆಯ ನಿಲುವೇ ಬೇರೆ. ಮುಂದೆ ಹೂವಯ್ಯ, ದೇವಯ್ಯ ಮೊದಲಾದವರ ವ್ಯಕ್ತಿತ್ವದಲ್ಲಿ ಹಂತಹಂತವಾಗಿ ಆಧುನಿಕತೆ ಮೆರುಗು ಪಡೆಯುವುದನ್ನು ಗಮನಿಸಬಹುದು. ಅಂತೆಯೇ ಇಡಿಯ ಮಲೆನಾಡಿನ ಸಾಂಸ್ಕೃತಿಕ ಚರ್ಯೆ ಬದಲಾಗುವುದನ್ನೂ ಗಮನಿಸಬಹುದು.

'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ ಬರುವ ಹೂವಯ್ಯ ಆದರ್ಶ ವ್ಯಕ್ತಿ ಸಮಾಜದ ಸುಧಾರಣೆ ಬಯಸುವವನು. ತನ್ನ ಪರಿಸರದ ಪ್ರತಿಯೊಬ್ಬ ವ್ಯಕ್ತಿಯನ್ನು ಇಷ್ಟಪಡುವವನು. ದಲಿತರಿಂದ ಬ್ರಾಹ್ಮಣರಾದಿಯಾಗಿ ಎಲ್ಲರ ಏಳ್ಗೆ ಬಯಸುವವನು.

ತನ್ನ ತಾಯಿ ನಾಗಮ್ಮನವರು ಅಥವ ಬೇರಾರಾದರೂ ಹೆಂಡ ಕುಡಿಯುವುದನ್ನು ಹೂವಯ್ಯ ಸಹಿಸುವುದಿಲ್ಲ.

ಕಾಲದಿಂದ ಕಾಲಕ್ಕೆ ಸಮಾಜ ಬದಲಾವಣೆ ಹೊಂದುತ್ತಲೆ ಹೋಗುತ್ತದೆ. ಬದಲಾವಣೆಗೆ ಕಾಲಘಟ್ಟಗಳು ಕಾರಣವಾಗುತ್ತವೆ. ಹೊಸ ಸಂಸ್ಕೃತಿಯ ಹೊಸ ಆವಿಷ್ಕಾರಗಳು ಬದಲಾವಣೆಗೆ ಪೂರಕವಾಗುತ್ತವೆ. ಜೊತೆಗೆ ಹೊಸ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವುದೂ ಕಾರಣವಾಗುತ್ತದೆ. ಉದಾ: ಕ್ರೈಸ್ತರ ಆಗಮನದಿಂದ ಇಡೀ ಮಲೆನಾಡಿನ ಚಿತ್ರಣವೇ ಬದಲಾಗುತ್ತದೆ.

ಕಾನೂರಿನ ಜನರಿಗೆ ಹೂವಯ್ಯನಂತಹ ಇನ್ನೊಂದು ವ್ಯಕ್ತಿಯ ಬದುಕಿನ ಚಿತ್ರಣದ ಕಲ್ಪನೆಯೇ ಇಲ್ಲದಿರುವುದರಿಂದ ಅವರಿಗೆ ವ್ಯವಸ್ಥೆಯ ದೋಷಗಳನ್ನರಿಯುವುದು ಸಾಧ್ಯವಾಗುವುದಿಲ್ಲ. ಬದಲಿಗೆ ಹೂವಯ್ಯನೇ ದೋಷಿಯಾಗಿ ಕಾಣುತ್ತಾನೆ. ನಾವು ಹೂವಯ್ಯನನ್ನು 'ಕೇವಲ ಒಬ್ಬ ವ್ಯಕ್ತಿಯಾಗಿ ನೋಡದೆ ಒಂದು ಕಾಲಘಟ್ಟದ ಸಾಂಸ್ಕೃತಿಕ ಸಾಮಾಜಿಕ ಸಂಘರ್ಷದ, ಆಧುನಿಕತೆ ಮತ್ತು ಪುರಾತನಗಳ ಮುಖಾಮುಖಿಯ ಪ್ರತಿಮೆಯಾಗಿ ನೋಡಬೇಕು' ಎಂದು ಡಾ॥ ಎಲ್.ಸಿ. ಸುಮಿತ್ರಾರವರು ('ನಿಯುಕ್ತ' ಸಿ.ವಿ.ಜಿ. ಪಬ್ಲಿಕೇಷನ್ಸ್ ೨೦೦೪ ಪು ೩) ಹೇಳುತ್ತಾರೆ. ಹೌದು ಹೂವಯ್ಯ ಒಂದು ರೀತಿಯಲ್ಲಿ ಹಳೆತಲೆಮಾರು ಮತ್ತು ಹೊಸ ತಲೆಮಾರುಗಳ ಕೊಂಡಿಯಂತೆ, ಆ ಮಲೆನಾಡಿನ ಪರಿಸರಕ್ಕೆ ಮಾರ್ಗದರ್ಶಕನಂತೆ ಕಾಣುತ್ತಾನೆ.

ಇದೇ ವಿಷಯವನ್ನು ಕುರಿತು ಶ್ರೀ ಕೆ.ವಿ. ಸುಬ್ಬಣ್ಣನವರು 'ಆಧುನಿಕ ಕನ್ನಡ ಸಾಹಿತ್ಯಕ್ಕೆ ಹೀಗೆ ಬನ್ನಿ' ಎಂಬ ಲೇಖನದಲ್ಲಿ ಹೀಗೆ ಹೇಳುತ್ತಾರೆ: 'ಸಮೃದ್ಧ ಪ್ರಕೃತಿ ಅದರ ನಡುವಣ ಪ್ರಾಕೃತಿಕ ಬದುಕು, ಬೇಟೆ, ಹಿಂಸೆ, ಮೌಢ್ಯ-ಜೀವನ, ಛಲ, ಹಲವು ಸಹಸ್ರ ವರ್ಷಗಳ ಸುಸಂಸ್ಕೃತ ಚಿಂತನೆ, ನಾಜೂಕಿನ ಬದುಕು, ಅಲ್ಲೇ ಕೊಳೆತುಕೊಂಡು ಹುಟ್ಟಿಕೊಂಡ ಅಹಂಕಾರ, ಪಕ್ಷಪಾತ, ಅಮಾನವೀಯತೆ, ಭೀಭತ್ಸ, ಶೋಷಣೆ ಹೊಸದಾಗಿ ಹೊರಗಿಂದ ಬಂದು ಇಲ್ಲಿನ ಕಶ್ಮಲವನ್ನೆಲ್ಲ ಕಾಣಿಸುತ್ತಲೂ ಕಾಣಿಸುತ್ತಲೇ ತನ್ನ ನಿರ್ದಯ ಕಬಂಧ ಬಾಹುಗಳಿಂದ ಅಪ್ಪಿ ಅಮರಿ ಆಕ್ರಮಿಸಿಕೊಂಡ ಪಾಶ್ಚಾತ್ಯ ನಾಗರಿಕತೆ ಇಂಥ ಕುರಿಕೊಪ್ಪರಿಗೆಯಲ್ಲಿ ಹೆಣಗಾಡುತ್ತಿದ್ದ, ಅಂಥ ಹೆಣಗಾಟದಲ್ಲಿ ಕೆಲವೊಮ್ಮೆ ದೊಗಲು, ದೊಗಲಾಗಿ ಹಾಸ್ಯಾಸ್ಪದವಾಗಿ ಬಾಲಿಶವಾಗಿ ಕೂಡ ಕಾಣಿಸುತ್ತಿದ್ದ ಇಂಡಿಯಾದ ಶತಮಾನದ

ಇತಿಹಾಸಕ್ಕೆ ಗೊಮ್ಮಟ ಪ್ರತಿಮೆಯಾಗಿ ನಿಲ್ಲುತ್ತಾನೆ ಹೂವಯ್ಯ. ಹೀಗಾಗಿ ಹೂವಯ್ಯನಿಗೆ ಸರಿಸಾಟಿಯಾಗಿ ನಿಲ್ಲುವ ವ್ಯಕ್ತಿತ್ವ ಮಲೆನಾಡಿನಲ್ಲೆ ಸಿಗುವುದಿಲ್ಲ. ಅವನಿಗೆ ಚಂದ್ರಯ್ಯ ಗೌಡರು ಸವಾಲಾಗಿ ನಿಲ್ಲುತ್ತಾರೆ. "ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹತ್ತಿ ಉರಿದರೆ ನಿಲ್ಲಲಾಗದು" ಎಂಬ ಬಸವಣ್ಣನ ವಚನದ ಸಾಲಿನಲ್ಲಿ ಉಲ್ಲೇಖಿತವಾದ ಅರ್ಥವಂತಿಕೆಯನ್ನು ಹೂವಯ್ಯ ಹಾಗೂ ಚಂದ್ರಯ್ಯ ಗೌಡರಿಗೆ ಅನ್ವಯಿಸಿ ನೋಡಬೇಕು. ಹೂವಯ್ಯನನ್ನು ಪೋಷಿಸಿ, ಪ್ರೋತ್ಸಾಹಿಸಬೇಕಾದ ಚಂದ್ರಯ್ಯ ಗೌಡರು ಹೆಜ್ಜೆಹೆಜ್ಜೆಗೂ ಆತನಿಗೆ ಅಡ್ಡಗಾಲು ಹಾಕುತ್ತಾರೆ. ನಿಜಕ್ಕೂ ಚಂದ್ರಯ್ಯಗೌಡರು ಹೂವಯ್ಯನ ಚಿಕ್ಕಪ್ಪ. ತನ್ನ ಮಗನಿಗೆ ಸಮಾನವಾದ ಹೂವಯ್ಯನಿಗೆ ಆ ಬಗೆಯ ಸ್ಥಾನಮಾನವನ್ನೇನೂ ಚಂದ್ರಯ್ಯಗೌಡ ಕೊಡುವುದಿಲ್ಲ.

ಚೀಂಕ್ರ ರಂಗಪ್ಪ ಗೌಡರೊಂದಿಗೆ ಮಾತನಾಡುತ್ತಾ "ಈಗಲೇ ಎಲ್ಲಿ ಆಗುತ್ತದೇರಿ ನೀವು ಊರಿಗೆ ಹೋಗಿ ಬರಾಕೆ? ಜೈಮುನಿ ಬರೆದು ಕೊಡ್ತೀನಿ ಅಂದಿರಿ. ಅದೂ ಪೂರೈಸಿಲ್ಲ. ನಮ್ಮ ಆಳುಲೆಕ್ಕ ಬ್ಯಾರೆ ಇದೆ. ಸರಕಾರ ಬೇರೆ ಏನೇನೋ ಹೊಸ ರೂಲೀಸು ಮಾಡಿ, ಹೊಸ ಅಮುಲ್ದಾರರು ಲೋಟೀಸಿನ ಮೇಲೆ ಲೋಟೀಸು ಜಾರಿ ಮಾಡ್ತಿದ್ದಾರೆ." (ಮ.ಮ. ಪು. ೧೨೩) ಎನ್ನುತ್ತಾನೆ. ಚೀಕ್ರನಂತಹ ನಿರಕ್ಷರಕುಕ್ಷಿಯೂ ವಿದ್ಯಾವಂತರ ಬಾಯಿಂದ ಅಲ್ಲಿ ಇಲ್ಲಿ ತಿಳಿದು ಬಂದ ಇಂಗ್ಲೀಷ್ ಪದಗಳನ್ನು ಅವುಗಳ ಅರ್ಥವನ್ನು ಗ್ರಹಿಸಿಕೊಂಡು ಉಚ್ಚಾರವನ್ನೂ ಅರಿಯದೆ ಬಳಸುತ್ತಾನೆ. ಇದನ್ನೇ ಇರಬೇಕು, ಕವಿರಾಜ ಮಾರ್ಗಕಾರ 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದರು. ಓಲೆಗರಿ ನಕಲು ಮಾಡಿ ಸಾಹಿತ್ಯ ಸೇವೆ ಮಾಡುವಂತಹ ಪುಣ್ಯಕರ ಕೆಲಸಗಳಲ್ಲಿ ರಂಗಪ್ಪ ಗೌಡರು ನಿರತರಾಗಿದ್ದದ್ದು ಸರ್ಕಾರದ ಹೊಸ ನೀತಿಗಳಿಗೆ ಸೇರಿದ ಅಂಶ ಹೊಸ ಹೊಸ ನಿಯಮಗಳು ಮಲೆನಾಡಿನ ಜನರ ಜಮೀನ್ದಾರಿ ಒಡೆತನವನ್ನು ಒಡೆಯುವ ತಂತ್ರವಾಗಿ ರೂಪುಗೊಳ್ಳುತ್ತಿದ್ದವು. ಆದರೂ ಸರ್ಕಾರ ಭೂಮಾಲಿಕರ ಹಿಡಿತವನ್ನು ಸಡಿಲಗೊಳಿಸಿ ಇಡೀ ಸಮಾಜದ ಏಳಿಗೆಗೆ ಅಗತ್ಯವಿರುವ ಹೊಸ ನೀತಿಗಳನ್ನು ತಂದಿದ್ದು ಮೆಚ್ಚತಕ್ಕ ಅಂಶ.

ಮಲೆನಾಡಿನ ಜನ ಗಾಯವಾದರೆ ಗಿಡಮೂಲಿಕೆ ಬಳಸುವುದರ ಬದಲಾಗಿ ಜೀವರತ್ನಯ್ಯ ಪಾದ್ರಿಗಳು ಕೊಟ್ಟಿದ್ದ ಔಷಧ, ಬಿಳಿಪುಡಿ ಬಳಸುತ್ತಾರೆ. ಬೌರಿಂಗ್ ಪೌಡರನ್ನು

ಗಾಯಕ್ಕೆ ಹಾಕಿಕೊಳ್ಳುವ ಕ್ರಮ ಮಲೆನಾಡಿಗೆ ಬಂದದ್ದು ಮಿಷಿನರಿಗಳಿಂದಲೆ. ಹೀಗೆ ಕುವೆಂಪು ಅವರ ಕಾದಂಬರಿಗಳಲ್ಲಿ ಮಲೆನಾಡಿಗೆ ಆಧುನಿಕತೆ ಪ್ರವೇಶಿಸಿದ ಕಾಲ, ಸಂದರ್ಭ ಇತ್ಯಾದಿಗಳ ಸಮಗ್ರ ವಿವರಗಳು ಲಭಿಸುತ್ತವೆ. ಆದ್ದರಿಂದ ಮಲೆಗಳಲ್ಲಿ ಮದುಮಗಳು ಹಾಗೂ ಕಾನೂರು ಸುಬ್ಬಮ್ಮ ಹೆಗ್ಗಡಿತಿಗಳೆರಡೂ ಕಾದಂಬರಿಗಳಾಗಿ ಉತ್ಕೃಷ್ಟಮಟ್ಟದವುಗಳಾಗಿ ಮೆರೆದದ್ದಷ್ಟೇ ಅಲ್ಲ; ಐತಿಹಾಸಿಕ ಮಹತ್ವಗಳಿಂದಲೂ ಸಂಪನ್ನವಾಗಿದೆ ಎನ್ನಲಡ್ಡಿಯಿಲ್ಲ.

ಹೂವಯ್ಯನಿಗೆ ಅವಿಭಕ್ತ ಕುಟುಂಬದ ಸಮಸ್ಯೆಗಳೊಂದಿಗೆ ಸಾಂಸ್ಕೃತಿಕ ಸಂಘರ್ಷಗಳ ಆಧುನಿಕ ಸಮಾಜಕ್ಕೆ ಹೊಂದಿಕೊಳ್ಳುವ ಅನಿವಾರ್ಯತೆ ಇತ್ತು. ಕೇವಲ ಇಪ್ಪತ್ತನೇ ವಯಸ್ಸಿಗೆಲ್ಲ ಎಂಥ ಸಮಾಜಿಕ ಕಳಕಳಿ ಅವನಿಗೆ ಕಾ.ಹೆ. ಕಾದಂಬರಿಯಲ್ಲಿ ಬರುತ್ತದೆಂದರೆ 'ವರ್ಡ್ಸ್‌ವರ್ತ್, ಮ್ಯಾಥ್ಯೂ ಆರ್ನಾಲ್ಡ್‌ರಂಥ ಪಾಶ್ಚಾತ್ಯ ಸಾಹಿತಿಗಳ ಅಧ್ಯಯನದ ಮೂಲಕ ಈ ಕುರಿತು ಹೂವಯ್ಯ ಚಿಂತಿಸುವಂತಾಗುತ್ತದೆ. ಅದು ಅವನ ಆದರ್ಶಗಳಿಗೂ ವಾಸ್ತವಕ್ಕೂ ಇರುವ ಅಂತರ ತಿಳಿಸುತ್ತದೆ. "ಭಾರತೀಯ ಸ್ವರಾಜ್ಯ ಸಂಪಾದನೆಯ ಪ್ರಯತ್ನ ಸಂಕಟಗಳು ರಾಷ್ಟ್ರನಾಯಕರ ಆಂದೋಲನಕಾರರ ಉಪನ್ಯಾಸಗಳು, ಬ್ರಿಟೀಷರ ದಬ್ಬಾಳಿಕೆಯ ನಡತೆಗಳು, ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು ಇವುಗಳನ್ನು ಓದುತ್ತಾ ಅವನ ಆತ್ಮ ಸಂಕಟಕ್ಕೀಡಾಗುತ್ತದೆ. ಹಿಂದೆ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದಿದಾಗ ತಾನೂ ಅವರಂತಾಗಬೇಕೆಂದು ಕಟ್ಟಿದ್ದ ಹೊಂಗನಸಿನ ಹಡಗು ಯಾವುದೋ ಅಜ್ಞಾತವಾದ ಮರಳುದಿನ್ನೆಗೆ ಡಿಕ್ಕಿ ಹೊಡೆದು ನಡೆಗೆಟ್ಟು ನಾಶವಾಗುವುದರಲ್ಲಿದೆಯಲ್ಲ!" (ಪು.೩೨೮ ಕಾನೂರ ಹೆಗ್ಗಡತಿ). ಆದರ್ಶ ಸಮಾಜದ ಕನಸು ಕಂಡ ಹೂವಯ್ಯನಿಗೆ ಕನಸು ಭಗ್ನವಾಗುವ ಸನ್ನಿವೇಷಗಳು ಮನಸ್ಸನ್ನು ಹಿಂಡುತ್ತವೆ. ಕನಸು ಕನಸಾಗೇ ಉಳಿಯುವುದೆಂಬ ಭಯ ಆವರಿಸುತ್ತದೆ. ಇದೇ ಮಹಾನ್ ಪುರುಷರಿಗೆ ಇರಬೇಕಾದ ಸಮಾಜಿಕ ಕಳಕಳಿ. ಇದೇ ಹೂವಯ್ಯನ ಕಳಕಳಿ ಕೂಡ.

ಕಾನೂರು ಹೆಗ್ಗಡಿತಿಯಲ್ಲಿ ಸಿಂಗಪ್ಪಗೌಡರ ಮೇಲೆ ನಾಟಕಳ್ಳತನದ ಆಪಾದನೆ ಬರುತ್ತದೆ. ಚಂದ್ರಯ್ಯ ಗೌಡರು ರೇಂಜರ್ ಆಫೀಸಿಗೆ ಹೋಗಿ ಕಂಪ್ಲೆಂಟ್ ಮಾಡುತ್ತಾರೆ. ಕಂಪ್ಲೆಂಟ್‌ಗೆ ಪ್ರತಿಕ್ರಿಯೆಯಾಗಿ. ಅಧಿಕಾರಿಗಳು ನಾಟವನ್ನು ಹುಡುಕಲು ಬರುತ್ತಾರೆ. ಆದರೆ ಕಳ್ಳನಾಟ ಸಿಗುವುದಿಲ್ಲ. ರೇಂಜರ್ ಬಂದ ದಾರಿಗೆ ಸುಂಕವಿಲ್ಲದೆ ಅವರು ವಾಪಸ್

ಹೋಗುತ್ತಾರೆ. ಇಲ್ಲಿ ಚಂದ್ರಯ್ಯ ಗೌಡರು ಸ್ವರಾಜ್ಯ, ಸ್ವಾತಂತ್ರ್ಯದ ಬಗ್ಗೆ ಆಸಕ್ತಿ ಇಲ್ಲದವರು, ಕೇವಲ ಊರಿನ ಜಮೀನ್ದಾರಿಕೆ ಮಾಡಿಕೊಂಡಿದ್ದಂಥವರು. ರೇಂಜರ್ ಆಫೀಸ್‌ಗೆ ಹೋಗುವುದು ಕೂಡ ಹೊಸ ಸಮಾಜದ ವ್ಯವಸ್ಥೆಗೆ ಸ್ಪಂದಿಸಿದ್ದನ್ನು ತಿಳಿಸುತ್ತದೆ.

ಉಪದೇಶಿ ಜೀವರತ್ನಯ್ಯನವರು ಪಿಟೀಲು ಕೊಯ್ಯುವುದು (ಮ.ಮ.ಪು ೭೨೧) ಆ ಮೂಲಕ ಮಲೆನಾಡಿಗೆ ಹೊಸ ಸಂಗೀತ ಉಪಕರಣ ಬಂದದ್ದನ್ನು ತಿಳಿಸುತ್ತದೆ. ಪಾಶ್ಚಾತ್ಯರು ಹೆಚ್ಚಾಗಿ ಮದುವೆ, ಸಭೆ, ಸಮಾರಂಭಗಳಲ್ಲಿ ಬಿಡುವಿನ ವೇಳೆಯಲ್ಲಿ ಪಿಟೀಲು, ಗಿಟಾರ್‌ನಂತಹ ಸಂಗೀತ ಉಪಕರಣಗಳನ್ನು ಬಳಸುತ್ತಿದ್ದರು.

ಆಧ್ಯಾತ್ಮಿಕತೆ ಜೀವನದ ಒಂದು ಅಂಗ. ಅದೇ ಮಾರ್ಗದಲ್ಲಿ ಜೀವನದಲ್ಲಿ ಸುಖ, ಶಾಂತಿ, ನೆಮ್ಮದಿಗಳ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬೇಕು. ಲೌಕಿಕ ಜೀವನದ ಆಸೆ, ಆಮಿಷ, ಅರಿಷಡ್ವರ್ಗಗಳನ್ನು ಮೀರಿ ಆತ್ಮ ಸಾಕ್ಷಾತ್ಕಾರದ ಮಾರ್ಗಹಿಡಿಯಬೇಕಾಗಿದೆ. ಸನಾತನ ಧರ್ಮದ ತಳಹದಿಯ ಮೇಲೆ ಜೀವನ ರೂಪಿಸಿದ ಬುದ್ಧ, ಬಸವಣ್ಣ, ವಿವೇಕಾನಂದ, ರಾಮಕೃಷ್ಣ ಪರಮಹಂಸ, ಶಾರದಾಂಬೆಯವರು ಆಧ್ಯಾತ್ಮಿಕತೆಯಲ್ಲೇ ಸುಖವನ್ನು ಕಂಡವರು. ಕುವೆಂಪುರವರು ರಾಮಕೃಷ್ಣ ಆಶ್ರಮದಲ್ಲೇ ಬೆಳೆದು ವಿದ್ಯಾಭ್ಯಾಸ ಮಾಡಿ ಸ್ವಾಮಿ ಶಿವಾನಂದರಿಂದ ದೀಕ್ಷೆ ಪಡೆದವರು. ತಮ್ಮ ಸಾಹಿತ್ಯದಲ್ಲಿ ಹೆಚ್ಚಾಗಿ ಆಧ್ಯಾತ್ಮವನ್ನೇ ಬಳಸಿಕೊಂಡು ಅದೇ ಮಾರ್ಗದಲ್ಲಿ ಚಿಂತನಾಪರರಾದವರು. ಅವರ ಕಾದಂಬರಿಗಳಲ್ಲಿ ಆಧ್ಯಾತ್ಮಿಕ ಚಿಂತನೆಯ ಮೂಲಕ ನಾಡನ್ನು ಕಟ್ಟುವ ಸಮುದಾಯವನ್ನು ಉಳಿಸಿ ಬೆಳೆಸುವ ಪ್ರಯತ್ನ ಮಾಡಿದವರು.

## ವಸಾಹತುಶಾಹಿ ಹಿನ್ನೆಲೆ

ವಸಾಹತುಶಾಹಿ ಹಿನ್ನೆಲೆಯಿಂದ ಆರಂಭವಾದ ಕುವೆಂಪು ಅವರ ಎರಡೂ ಕಾದಂಬರಿಗಳಲ್ಲಿ ಪುರೋಹಿತಶಾಹಿ, ಜಮೀನ್ದಾರಿ ಪದ್ಧತಿಗಳು ತಲೆ ಎತ್ತುತ್ತವೆ. ಈ ಎರಡೂ ಪದ್ಧತಿಗಳ ನಿರ್ಮೂಲನೆಗಾಗಿ ಕುವೆಂಪುರವರು ಹೂವಯ್ಯ, ಮುಕುಂದಯ್ಯ, ರಾಮಯ್ಯ, ಚಿನ್ನಯ್ಯರಿಗೆ ಶಿಕ್ಷಣ ನೀಡಿ ಆ ಮೂಲಕ ಉದಾರತೆಯ ನೆಲೆಗಟ್ಟಿಗೆ ಚಾಲನೆ ನೀಡುತ್ತಾರೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಪಾತ್ರಗಳ ಅಂತರಂಗದಲ್ಲೇ ಪ್ರತಿಭಟನೆಯ ಬೀಜ ಬಿತ್ತಲಾಗಿದೆ.

ಐತ–ಪೀಂಚಲು, ಗುತ್ತಿ–ತಿಮ್ಮಿ, ಬೀರ–ಸೇಸಿಯರ ಪ್ರತಿಭಟನೆ, ಪ್ರಾಯಶಃ ಜಾಣತನ ಮತ್ತು ಹೋರಾಟಗಳ ಮೂಲಕವೇ ನಡೆದಿದ್ದು. ಅದರಿಂದ ಶೂದ್ರ ಜಗತ್ತಿನ ಮೇಲುಮುಖ ಚಲನೆಗಳು ಸಾಧ್ಯವೆಂಬುದನ್ನು ಕುವೆಂಪುರವರು ಮನಗಂಡಿದ್ದರೆಂದು ತೋರುತ್ತದೆ. ಎರಡೂ ಕಾದಂಬರಿಗಳಲ್ಲಿ ಈ ಮಾತಿಗೆ ಸಮರ್ಥನೆಯಾಗಿ ಹೇರಳ ಉದಾಹರಣೆಗಳು ಲಭ್ಯವಾಗುತ್ತವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಹುಸಿ ಸಮನ್ವಯದ ಪ್ರಯತ್ನವಿಲ್ಲ. ಬದಲಾಗಿ ಇಂದಿನ ದಲಿತ ಹೋರಾಟಕ್ಕೆ ಬೇಕಾದ ಪ್ರೇರಣೆಗಳಿವೆ. ಬ್ರಿಟೀಷರ ಮೂಲ ಉದ್ದೇಶ ಬಂಡವಾಳಶಾಹಿ ಒಡೆತನದ ಮೂಲಕ ಲಾಭಗಳಿಸುವುದು ಹಾಗೂ ಮತಪ್ರಚಾರ ಮಾಡುವುದಾಗಿತ್ತು. ಅಂಥ ಉದ್ದೇಶವನ್ನು ದೇಶೀಯ ನೆಲೆಯ ಹರಿಕಾರರಾಗಿರುವ ಕುವೆಂಪು ಬಲವಾಗಿ ವಿರೋಧಿಸುತ್ತಾರೆ.

ಕುವೆಂಪು ಕನ್ನಡ ಸಾಹಿತ್ಯದ ಜೊತೆಜೊತೆಗೆ ಭಾರತೀಯ ಸಾಹಿತ್ಯ ಸಂಸ್ಕೃತಿ ತತ್ತ್ವ ಚಿಂತನೆಗಳನ್ನೂ ಅರಗಿಸಿಕೊಂಡವರು. ಕುವೆಂಪುರವರೇ ಹೇಳುವಂತೆ ಅವರು ಇಂಗ್ಲೀಷ್ ವಿರೋಧಿಯಲ್ಲ. ಬ್ರಿಟೀಷರು ಕೊಟ್ಟ ಶಿಕ್ಷಣ ಪದ್ಧತಿ, ನಾಗರಿಕತೆಯ ಕೆಲವಾರು ಅಂಶಗಳು ಕುವೆಂಪು ಅವರಿಗೆ ಇಷ್ಟವೆ. ಆದರೆ ಬ್ರಿಟೀಷರ ಕೊಡುಗೆ ಮಲೆನಾಡಿನ ಮುಗ್ಧಜನರಿಗೆ ಮುಳುವಾಗಬಾರದು ಎಂಬುದರ ಬಗ್ಗೆ ಅವರಿಗೆ ವಿಶೇಷ ಕಾಳಜಿಯಿತ್ತು.

'ಕಾನೂರು ಹೆಗ್ಗಡತಿ' ಪಾಶ್ಚಾತ್ಯರ ಪ್ರಭಾವದ ವಾಸ್ತವ ಮಾರ್ಗವು ಜೀವಾಳವಾಗಿರುವ ಸಾಹಿತ್ಯ ಪ್ರಕಾರವಷ್ಟೇ ಆದರೂ ಅದು ಕೇವಲ ವಾಸ್ತವ ಮಾರ್ಗದ್ದೆಂದು ಹೇಳ ಹೊರಟರೆ ತಪ್ಪಾಗುತ್ತದೆ. ಆ ಕಾಲಕ್ಕೆ ರೂಢಿ ಜಡವಾಗಿದ್ದ ನಮ್ಮವರ ಬದುಕಿಗೂ ಸಂಸ್ಕೃತಿಗೂ 'ವಾಸ್ತವ' ವೆಂಬುದರ ತೀವ್ರ ಎಚ್ಚರವು ಅತ್ಯಗತ್ಯವಾಗಿತ್ತು. ಅಷ್ಟೇ ಅಲ್ಲದೆ ಕುವೆಂಪುರವರಲ್ಲಿ ನವೋದಯ ಸಾಹಿತ್ಯದ ಪ್ರೇರಣೆ ಹಾಗೂ ಶೂದ್ರ ಪ್ರಜ್ಞೆಯ ಬಗ್ಗೆ ಕಾಳಜಿಯೂ ಇದ್ದುದರಿಂದ ಅನಕ್ಷರಸ್ತ ಪಾತ್ರಗಳನ್ನು ಬೆಳಕಿನೆಡೆಗೆ ಕೊಂಡೊಯ್ಯುವ ಪ್ರಯತ್ನವನ್ನು ಅವರು ನಿರಂತರ ಮಾಡುತ್ತಾರೆ.

"ಧರ್ಮ ಪ್ರಚಾರದ ಹಿನ್ನೆಲೆಯನ್ನು ಕ್ಷುಲ್ಲಕವಾಗಿ ಕಂಡರೂ ಮಿಷಿನರಿಗಳಿಗಿದ್ದ ಸಾಮಾಜಿಕ ಕಾಳಜಿಯನ್ನು ಕಾದಂಬರಿಕಾರರು ಮೆಚ್ಚಿಕೊಳ್ಳುತ್ತಾರೆ. ಕಗ್ಗತ್ತಲ ಖಂಡದಲ್ಲಿ ಪಂಜಿನ ಬಿಸಿಯು ಸುಡುವುದು ದಿಟವಾದರೂ ಅದರದೇ ಬೆಳಕಿನಲ್ಲಿ ಮೊದಲಿನಿಂದಲೂ ಇದ್ದ ಹುಲಿ-ಕರಡಿಗಳು ಕಾಣಿಸಿಕೊಳ್ಳುತ್ತವೆ" ಎಂಬ ಎಚ್.ಎಸ್. ರಾಘವೇಂದ್ರರಾವ್‌ರವರ ಹೇಳಿಕೆ ಸಮಂಜಸವಾಗಿದೆ(ಪು.೨೫೦, ಕು.ಸಾ.ವ.ಸ್ವ).

ವಸಾಹತುಶಾಹಿಯ ಪ್ರಭಾವಕ್ಕೆ ಎರಡು ಮುಖಗಳಿವೆ. ಮೊದಲನೆಯದು ಬ್ರಿಟೀಷರ ಆಡಳಿತ, ಎರಡನೆಯದು ಅವರು ನೀಡಿದ ಶಿಕ್ಷಣದಿಂದ ಅನಾವರಣವಾದ ಸಾಂಸ್ಕೃತಿಕ ಜಗತ್ತು. ಇಂಗ್ಲೀಷ್ ಶಿಕ್ಷಣ ಪಡೆದ ಎಲ್ಲರಿಗೂ ಯೂರೋಪ್‌ನ ಸಾಂಸ್ಕೃತಿಕ ಜಗತ್ತು ಸಿಗಲಿಲ್ಲ. ಗ್ರಂಥಾಲಯವೆಂಬ ಹುತ್ತದಲ್ಲಿ ವಾಲ್ಮೀಕಿಯಂತೆ ತಪಸ್ಸು ಮಾಡಿದ ಕುವೆಂಪು ಅವರಿಗೆ ಇದು ದೊರೆಯಿತು. ಈ ಜಗತ್ತಿನಲ್ಲಿ ಹೋಮರ್, ಡಾಂಟೆ, ಟಾಲ್‌ಸ್ಟಾಯ್‌ಗಳೂ ಇದ್ದರು. ಲೆನಿನ್, ಬಿಸ್ಮಾರ್ಕ್, ಕ್ರಾಂವೆಲ್‌ರೂ ಇದ್ದರು. ಫ್ರಾನ್ಸ್‌ನ ಕ್ರಾಂತಿ, ರಷ್ಯಾದ ಕ್ರಾಂತಿಗಳೂ ಇದ್ದವು. ಈ ಜಗತ್ತಿನಲ್ಲಿ ವಸಾಹತುಶಾಹಿಗೆ ಪ್ರೇರಣೆಯಾದ ಶಕ್ತಿಗಳಿದ್ದಂತೆಯೇ ಅಮೇರಿಕಾದ ಸ್ವಾತಂತ್ರ್ಯ ಹೋರಾಟವೂ ಇತ್ತು.

ಕುವೆಂಪುರವರು ಬ್ರಿಟೀಷ್ ಮೌಲ್ಯಗಳ ಆರಾಧಕರಾಗಬಹುದಿತ್ತು, ಆಗಲಿಲ್ಲ, ಆದರೆ ಕೂಲಿಮಠ ಮತ್ತು ಪ್ರೈಮರಿ ಶಾಲೆಗಳ ನಡುವೆ ಅವರ ಆಯ್ಕೆ ಎರಡನೆಯದೇ ಆಗಿತ್ತು. ಜಾಗತಿಕ ಆಗುಹೋಗುಗಳನ್ನು ಗಮನಿಸುತ್ತಲೇ ಬೆಳೆದ ಕುವೆಂಪುರವರು ತಮ್ಮ ಕಣ್ಣೆದುರಿನ ಮಲೆನಾಡಿನಲ್ಲೂ ಆಧುನಿಕತೆಯನ್ನು ಕಾಣುವ ನಿರೀಕ್ಷೆಯಲ್ಲಿದ್ದರು. ದೇಶೀಯ ಸಂಸ್ಕೃತಿಯ ಜೊತೆಗೆ ಹೊಂದಾಣಿಕೆಯಾಗುವ ರೀತಿಯ ಆಧುನಿಕತೆಯನ್ನಷ್ಟೆ ಅವರು ಮೆಚ್ಚುತ್ತಿದ್ದರು.

'ಕಾನೂರು ಹೆಗ್ಗಡತಿ'ಯಲ್ಲಿ ಪರಿಸರದ ಬಗ್ಗೆ ಅಸಹನೆ ತಳೆದ ಸುಧಾರಣಾವಾದಿಯೊಬ್ಬನ ತುಡಿತಗಳನ್ನು ಗುರುತಿಸಬಹುದಾಗಿದೆ. 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಪುನರ್ಜನ್ಮ ಕರ್ಮಸಿದ್ಧಾಂತ ಕಂಡು ಬರುವಂತೆ ಕಾವ್ಯವನ್ನು ಸಾಮುದಾಯಕ ಪ್ರಚೋದನೆಗಾಗಿ ಬಳಸಿಕೊಳ್ಳುವ ಉದ್ದೇಶದಲ್ಲೂ ಕುವೆಂಪು ಎರಡನೆಯವರಲ್ಲ ಎಂದು ಎಚ್.ಎಸ್. ರಾಘವೇಂದ್ರರಾವ್‌ರವರ ಅಭಿಪ್ರಾಯ ಪಡುತ್ತಾರೆ. (ಕು.ಸಾ.ವ.ಸ್ವ.ಪು. ೨೫೧). ಈ ಪರಿಕಲ್ಪನೆಯಲ್ಲಿ ಇರುವ ಆಧುನಿಕ ಅಂಶಗಳನ್ನು ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ವಿಶ್ಲೇಷಿಸುವ ಅಗತ್ಯವಿದೆ. ಆಧುನಿಕತೆಯನ್ನು ವಸಾಹತುವಾದ ತನ್ನ ಸಮರ್ಥನೆಗಾಗಿ ಬಳಸಿಕೊಳ್ಳುವುದರಿಂದ ವಸಾಹತುವಾದವನ್ನು ವಿರೋಧಿಸುವ ರಾಷ್ಟ್ರೀಯತಾವಾದ ಆಧುನಿಕತೆಯನ್ನು ಮೈಗೂಡಿಸಿಕೊಂಡಿದ್ದು ಅದಕ್ಕೊಂದು

ಪ್ರತಿಕ್ರಿಯೆಯಾಗಿಯೂ ಹೌದು. ಪಾಶ್ಚಾತ್ಯ ಶಿಕ್ಷಣದಿಂದ, ಚಿಂತನೆಗಳ ಪ್ರಭಾವದಿಂದ ಭಾರತೀಯ ಶಿಷ್ಟ ವರ್ಗದಲ್ಲಿ ಬೆಳೆಯುತ್ತಿರುವ ವ್ಯಕ್ತಿ ಸ್ವಾತಂತ್ರ್ಯ ಕಲ್ಪನೆ, ವಿಚಾರವಾದ, ವಿಜ್ಞಾನವಾದ ಮುಂತಾದವು ಭಾರತೀಯ ಸುಧಾರಣಾವಾದಿ ಹಾಗೂ ಪುನರುತ್ಥಾನವಾದಿ ಚಳುವಳಿಗಳೆರಡನ್ನೂ ಪ್ರಭಾವಿಸಿವೆ. ಭಾರತದಲ್ಲಿ ಅದಾಗಲೇ ಅಸ್ತಿತ್ವದಲ್ಲಿದ್ದ ಸಾಮಾಜಿಕ ಆಚಾರಗಳು, ಮೌಲ್ಯಗಳು, ನೀತಿ ನಿಯಮಗಳು, ಭಾರತೀಯ ಸಮಾಜದ ವಸಾಹತು ಕಲ್ಪನೆಯನ್ನು ಕಟ್ಟಿಕೊಟ್ಟು ವಸಾಹತುವಾದವನ್ನು ಸಮರ್ಥಿಸುತ್ತಿದ್ದವು. ಭಾರತವನ್ನು ಈ ವಸಾಹತು ವ್ಯವಸ್ಥೆಯಿಂದ 'ರಾಷ್ಟ್ರ' ವ್ಯವಸ್ಥೆಗೆ ಪರಿವರ್ತಿಸುವಾಗ ಆಧುನಿಕತೆ ರಾಷ್ಟ್ರವ್ಯವಸ್ಥೆಗೆ ಅನಿವಾರ್ಯವಾಯಿತು.

ಕಾನೂರು ಹೆಗ್ಗಡತಿ ಕಾದಂಬರಿಯಲ್ಲಿ ಸಂಸಾರದ ಕ್ಷುದ್ರತೆಯನ್ನು ಮೀರಲು ತ್ಯಾಗ, ಸಹನೆ, ಶಾಂತಿ, ಧ್ಯಾನ, ಮುಂತಾದ ಬೌದ್ಧ ತತ್ವಗಳ ಸಹಾಯವನ್ನು ಪಡೆದುಕೊಳ್ಳಲಾಗಿದೆ. ಆದರೆ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಇಂಥ ತತ್ವಗಳನ್ನು ಗೌಣಮಾಡಿ ಕರ್ಮ, ಪುನರ್ಜನ್ಮ, ದೈವಿಸಂಕಲ್ಪ ಮುಂತಾದ ಸನಾತನ ತತ್ವಗಳನ್ನು ಬಳಸಿಕೊಳ್ಳಲಾಗಿದೆ. ಅಂದರೆ ಕುವೆಂಪು ಅವರು ಕಾನೂರು ಹೆಗ್ಗಡತಿಯನ್ನು ರಚಿಸುವ ಕಾಲಕ್ಕೆ ರಾಮಕೃಷ್ಣ ಪರಮಹಂಸರ, ಸ್ವಾಮಿವಿವೇಕಾನಂದರ ಮಾರ್ಗವನ್ನು ಸ್ವೀಕರಿಸಿ ಆಗಿರಲಿಲ್ಲವೆಂಬುದು ಗಮನಕ್ಕೆ ಬರುತ್ತದೆ. ಮಲೆಗಳಲ್ಲಿ ಮದುಮಗಳು ರಚಿತವಾದ ಕಾಲಕ್ಕೆ ಈ ಸ್ಥಿತ್ಯಂತರವೂ ಬಂತು.

ಕಾನೂರು ಹೆಗ್ಗಡಿತಿ ಮತ್ತು ಮಲೆಗಳಲ್ಲಿ ಮದುಮಗಳು ಕಾದಂಬರಿಗಳಿಗೆ ಪರಸ್ಪರ ಮೂರು ದಶಕಗಳ ಅಂತರವಿದೆ. ಕಾಲದ ದೃಷ್ಟಿಯಿಂದ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಘಟನೆಗಳು ಕಾನೂರು ಹೆಗ್ಗಡಿತಿಯ ಘಟನೆಗಳಿಗಿಂತ ಮೊದಲು ನಡೆದವು ಎನ್ನಬೇಕು. ಮೊದಲ ಕಾದಂಬರಿ ಬದುಕಿನ ಸ್ವರೂಪವನ್ನು ಚಿತ್ರಿಸಿ, ಭಟ್ಟಿಯಿಳಿಸಿ ಜೀವನ ದರ್ಶನ ಸಾರಿದರೆ ಎರಡನೇ ಕಾದಂಬರಿ ಬದುಕಿನ ಸ್ಥಿತಿಯನ್ನು ತೆರೆದು ತೋರಿಸುತ್ತದೆ. ಮಲೆಗಳಲ್ಲಿ ಮದುಮಗಳು ಇದರ ವಸ್ತು ಶುದ್ಧ ಕಾಮ, 'ಪುಟ್ಟಪ್ಪನವರು ಇಲ್ಲಿ ಕಾಮಕ್ಕೆ ಉದಾತ್ತತೆಯ ದರ್ಬಾರು ಪೋಷಾಕನ್ನಾಗಲೀ, ಇತರ ಲೇಖಕರ ಆರೋಪದ ಬಡತನದ ಚಿಂದಿಯನ್ನಾಗಲೀ ಉಡಿಸಿಲ್ಲ' ಎಂದ ಡಾ। ಪ್ರಭುಶಂಕರ ಅವರ ಮಾತು ಗಮನೀಯವಾಗಿದೆ.

ಕಾನೂರು ಹೆಗ್ಗಡಿತಿ ಕಾದಂಬರಿ ೧೯೩೬ರ ಆಸುಪಾಸಿನ ಮಲೆನಾಡಿನ ಸನ್ನಿವೇಶದ ಸಮಾಜದ ಸ್ಥಿತಿಗತಿಗಳನ್ನು ತಿಳಿಸುತ್ತದೆ. ಮಲೆನಾಡಿಗೆ ಆಧುನಿಕತೆ ಕಾಲಿಡುವ ಮೊದಲ ಹಂತದ ವಿಚಾರಗಳನ್ನಿಲ್ಲಿ ಕಂಡುಕೊಳ್ಳುವುದು ಸಾಧ್ಯ.

# ಅಧ್ಯಾಯ-೨

## ಪುರೋಗಾಮಿ ಚಿಂತನೆಗಳು

### ಕಾನೂರು ಹೆಗ್ಗಡತಿ

ಮನುಷ್ಯ ಹಂತಹಂತವಾಗಿ ವಿಕಾಸ ಹೊಂದಿ ಪ್ರಭುದ್ಧತೆಯನ್ನು ಕಾಣುತ್ತಾನೆ. ಹೊಸತನ್ನು ಸೃಷ್ಟಿಸಲು ಪ್ರಯತ್ನಿಸುತ್ತಾನೆ. ಹಾಗೆಯೇ ಅನೇಕ ಸೃಷ್ಟಿರಹಸ್ಯಗಳು ಹುಟ್ಟಿಕೊಂಡು ಅಥವಾ ಬೆಳಕು ಕಂಡು ಅವುಗಳ ನಡುವೆ ನವನವೀನತೆಯಿಂದ ಮೆರೆಯುತ್ತಾನೆ. ಪ್ರಸ್ತುತ 'ಕಾನೂರು ಹೆಗ್ಗಡತಿ'ಯ ಆರಂಭದಲ್ಲೇ ಆಧುನಿಕತೆಯ ಹೊಳಪನ್ನು ಕಾಣಬಹುದು. ಹೂವಯ್ಯನ ವೇಷಭೂಷಣ, ಕ್ರಾಪುತಲೆ, ಗುಂಗುರು ಗುಂಗುರುರಾದ ಮುಂಗುರುಳು, ನಸುಗೆಂಪು ಬಣ್ಣ ರಮಣೀಯರ ಸೌಂದರ್ಯವನ್ನು ಮನಸ್ಸಿಗೆ ತರುವಂತಿತ್ತು ಎಂಬ ವರ್ಣನೆಯಿದೆ. ಹುಡುಗರು ಹುಡುಗಿಯರಂತೆ ಕಂಡರೆ ಸುಂದರವಾಗಿರುವರೆಂಬ ಭಾವನೆಯನ್ನು ಇಲ್ಲಿ ಬಿಂಬಿಸಲಾಗಿದೆ.

ರಾಮಯ್ಯ, ಹೂವಯ್ಯ ಪಟ್ಟಣದ ನವನಾಗರಿಕತೆಯಿಂದ ಪ್ರಭಾವಿತರಾಗಿ ಕ್ರಾಪ್‌ಕಟ್ ಮಾಡಿಸಿದರೆ ಅವರನ್ನು ಅನುಸರಿಸುವ ವಾಸು ಕೂಡ ಜುಟ್ಟು ಬಿಡಲೊಲ್ಲದೆ ಕ್ರಾಪ್‌ಕಟ್ ಮಾಡಿಸಲು ಹಟ ಹಿಡಿಯುತ್ತಾನೆ. ಮುಂದೆ ಮಲೆಗಳಲ್ಲಿ ಮದುಮಗಳುವಿನ ಗೌಡ ಜನಾಂಗದ ದೇವಯ್ಯನೂ ಕ್ರಾಪ್‌ಕಟ್ ಮಾಡಿಸುತ್ತಾನೆ. ಕಿವಿಯಲ್ಲಿದ್ದ ಒಂಟಿ ತೆಗೆಸುತ್ತಾನೆ. ಪರಿಣಾಮವಾಗಿ ಬ್ರಾಹ್ಮಣ ಹೆಂಗಸರೂ ಇವನನ್ನು ನೋಡಿ ಆಕರ್ಷಿತರಾಗುತ್ತಾರೆ. ಬದಲಾವಣೆಯನ್ನು ಯುವಜನಾಂಗ ಇಷ್ಟಪಡುತ್ತದೆ. ಎಂಬುದಕ್ಕೆ ಕ್ರಾಪ್‌ಕಟ್ ಉತ್ತಮ ನಿದರ್ಶನ.

ಬಂಡವಾಳಶಾಹಿಯ ಮುಖ್ಯ ಲಕ್ಷಣವೆಂದರೆ ಬಂಡವಾಳ ಹೂಡಿ ಲಾಭಗಳಿಸುವುದೇ ಆಗಿದೆ. ಈ ಜಂಜಾಟದಲ್ಲಿ ಕೆಳಜಾತಿ, ವರ್ಗಗಳ ಪಾಡು ಹೇಳಲಸದಳವಾಗಿದೆ. ಗುತ್ತಿ ಇದಕ್ಕೆ ಸ್ಪಷ್ಟ ಉದಾಹರಣೆ. ಕಲ್ಲೂರು ಮಂಜಯ್ಯ ಭಟ್ಟರು ತಮ್ಮ ಸಾಲವನ್ನು ವಸೂಲಿಮಾಡಲು ಆಗಾಗ ಗೂಂಡಾ ಪಡೆಯನ್ನು ಬಳಸುವ ಅನಿವಾರ್ಯತೆಗೆ ಸಿಲುಕುತ್ತಾರೆ. ಈ ಬೆಳವಣಿಗೆ ಆಧುನಿಕ ಬಂಡವಾಳಶಾಹಿ ಜಗತ್ತಿನ ಅಂಗ ಎಂಬುದನ್ನು ಮರೆಯುವಂತಿಲ್ಲ. (ಕು.ಒಂ.ಸಾಂ.ನೆ). ದೊಡ್ಡ ದೊಡ್ಡ ಬ್ಯಾಂಕುಗಳು ಹಣವಸೂಲಿಗಾಗಿ ಗೂಂಡಾ ಪಡೆಯನ್ನು ನೇಮಿಸುವುದು ಈ ಕಾಲದಲ್ಲಿ ಸರ್ವಸಾಧಾರಣವಾಗಿಬಿಟ್ಟಿದೆ.

ಮಲೆನಾಡಿನ ಆ ಕುಗ್ರಾಮದಲ್ಲಿ ಎತ್ತಿನ ಬಂಡಿ ಓಡಾಡುವುದೇ ಹೊಸತು. ಹೂವಯ್ಯ, ರಾಮಯ್ಯರು ಮೈಸೂರಿನಿಂದ ಎತ್ತಿನ ಬಂಡಿಯಲ್ಲಿ ಬರುತ್ತಾರೆ. ಆ ಗಾಡಿಹೊಡೆಯುವ ಆಳು ನಿಂಗ ಯಾರೋ ಕೊಟ್ಟ ಗುಂಡಿಹರಿದ ಕೋಟನ್ನು ಹಾಕಿಕೊಂಡಿದ್ದ. ಮೈಮೇಲೆ ಬಟ್ಟೆಯನ್ನೇ ಕಾಣದ ನಿಂಗನಿಗೆ ಮಲೆನಾಡಿನ ಚಳಿಗೆ ಕೋಟು ಸಿಕ್ಕಿರುವುದು ವಿಶೇಷವಾಗಿ ಕಾಣುತ್ತದೆ. ಕರಿಯ ಕಂಬಳಿಯನ್ನಷ್ಟೇ ಮೈಮೇಲೆ ಹಾಕಿಕೊಳ್ಳುತ್ತಿದ್ದ ದಲಿತ ಜಗತ್ತಿಗೆ ಕೋಟಿನ ರುಚಿ ಸಿಕ್ಕಂತಾಯಿತು – ನಿಂಗನ ಮೂಲಕ.

ಅಷ್ಟೇ ಏಕೆ, ಪುಟ್ಟಣ್ಣ ಹಾಸನದ ಟೋಪಿ ಹಾಕಿರುವುದು, ಕ್ಷೌರ ಮಾಡಿಸಿರುವುದು, ಒಳ್ಳೆ ಮೈಕಟ್ಟುಳ್ಳವನಾದ ಆತ ಕಾಲಿನವರೆಗೂ ಬಿಳಿಪಂಚೆ ಉಟ್ಟಿದ್ದು, ಆಳುಗಳೂ ಆಧುನಿಕತೆಗೆ ಮುಖಮಾಡಿದ್ದನ್ನು ತಿಳಿಸಿಕೊಡುತ್ತದೆ.

ಕೆಳವರ್ಗದ ಆಳುಗಳು ಊಟಕ್ಕಾಗಿ ಹಾತೊರೆಯುತ್ತಿದ್ದರೆ ಹೂವಯ್ಯ, ರಾಮಯ್ಯರು ಹೊಟ್ಟೆ ಹಸಿದರೂ ನೆಂಟರ ಮನೆಗೆ ಹೋಗಲು ಹಿಂಜರಿಯುತ್ತಾರೆ. ದಾರಿಯಲ್ಲಿ ಯಾರಾದರೂ ಸಿಕ್ಕಿ ಕರೆದರೆ ಮಾತ್ರ ಹೋಗೋಣ ಎಂದು ನಿರ್ಧರಿಸುತ್ತಾರೆ. ಈ ಸುಶಿಕ್ಷಿತರು ನವನಾಗರಿಕತೆಗೆ ಮಾದರಿಯಾಗಿದ್ದಾರೆ. ಕರೆಯದಿದ್ದರೂ ಹೊಟ್ಟೆ ಹಸಿದಾಗ ಪಕ್ಕದ ಯಾವುದೋ ಗೌಡರ ಮನೆಯಿಂದ ಒಂದಷ್ಟು ಆಹಾರ ಕೇಳಿ ಪಡೆದು ಉಣ್ಣುವುದು ಕೆಳ ವರ್ಗದವರ ಜಾಯಮಾನ, ಶಿಕ್ಷಿತರು ಹಾಗಲ್ಲ.

ಚಿನ್ನಯ್ಯ ಬೀಡಿ ಸೇದುತ್ತಿದ್ದಾಗ ಚಂದ್ರಯ್ಯಗೌಡರ ಗಾಡಿ ಬರುತ್ತಿರುವುದನ್ನು ದೂರದಿಂದಲೇ ನೋಡುತ್ತಾನೆ. ಕೈಯಲ್ಲಿದ್ದ ಬೀಡಿ ತುಂಡು ಬಿಸಾಡುತ್ತಾನೆ ಎಂಬ ವಿವರಣೆ ಇದೆ. ಬೀಡಿ ಮುತ್ತಳ್ಳಿಯವರೆಗೂ ಕಾಲಿಟ್ಟು ಯುವಕರನ್ನು ಆಕರ್ಷಿಸಿತ್ತು. ಅಲ್ಲಿನ ನಾಯಿಗಳ ಹೆಸರೂ ಹೊಸತಾದುದನ್ನು ಕಾಣಬಹುದು. ರೂಬಿ, ಡೈಮೊಂಡ್, ಟೈಗರ್, ಟಾಪ್ಸಿ, ಇತ್ಯಾದಿ. ಗುತ್ತಿಯ ನಾಯಿ ಹುಲಿಯನನ್ನು ಕಂಡರೆ ಬೆಟ್ಟಳ್ಳಿ ನಾಯಿಗಳಿಗೆಲ್ಲಾ ವೈಸ್‌ರಾಯನನ್ನು ಕಂಡ ದೇಶೀರಾಜರುಗಳಂತೆ ವರ್ತಿಸುತ್ತಿದ್ದವು. ಹುಲಿಯನನ್ನು ಕಂಡೊಡನೆ ಬಾಲ ಮುದುರಿ ತಮ್ಮ ವಿನಯ ವಿಧೇಯತೆಗಳನ್ನು ಪ್ರದರ್ಶಿಸಿ ಒಳಗೊಳಗೆ ಹೆದರಿದರೂ ಹರ್ಷಾತಿರೇಕಕ್ಕೆಂಬಂತೆ ಬಿರುಸಿನಿಂದಲೇ ಬಾಲವಲ್ಲಾಡಿಸಿ ಲಿಂಗಭೇದಾನುಗುಣವಾಗಿ ನೆಕ್ಕುವ ಅಥವಾ ನೆಕ್ಕಿಸಿಕೊಳ್ಳುವ ಕ್ರಿಯಾರೂಪವನ್ನು ಪ್ರದರ್ಶಿಸುತ್ತಿದ್ದುವು. ಕಾದಂಬರಿಕಾರರಿಗೆ ವೈಸರಾಯಿ ಹುಲಿಯಂತೆಯೂ, ಶರಣಾಗತ ದೇಶೀರಾಜರು ಬೆಟ್ಟಳ್ಳಿ ನಾಯಿಗಳಂತೆಯೂ ಕಾಣುತ್ತಿದ್ದುದು ಅವರ ಬಗೆಗಿನ ತಿರಸ್ಕಾರ ಭಾವ ನಿಮಿತ್ತವಾಗಿ.

ಕಾನೂರು ಅಣ್ಣಯ್ಯಗೌಡರು ತಮ್ಮ ಆಸ್ತಿಯನ್ನೆಲ್ಲಾ ಕಳೆದುಕೊಂಡು ಒಕ್ಕಲಾಗುವರು. ಹೂವಳ್ಳಿ ವೆಂಕಟಪ್ಪನಾಯಕರು ಒಂದು ಕಾಲದಲ್ಲಿ ಒಂದು ಸೀಮೆಗೆ ಒಡೆಯರಾಗಿದ್ದ ಮನೆತನದವರು ಸಾಲಕ್ಕೆ ಸಿಕ್ಕಿ ದೈನೇಸಿ ಬದುಕು ಬಾಳುತ್ತಿದ್ದರು. ಭೂಮಿಯ ಖಾಸಗೀಕರಣದಿಂದಾಗಿ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾದವು. ಕುಟುಂಬ ಪದ್ಧತಿ ಚಿಂದಿಯಾಗುವ ಸಂದರ್ಭವೂ 'ಕಾನೂರು ಹೆಗ್ಗಡಿತಿ' ಕಾದಂಬರಿಯಲ್ಲಿ ಚರ್ಚಿತವಾಗಿದೆ. ಅವಿಭಕ್ತ ಕುಟುಂಬಗಳು ಒಡೆದು ಹರಿಹಂಚಾಗುವುದು ಕೂಡ ವಿದೇಶದಿಂದ ಬಳುವಳಿಯಾಗಿ ಬಂದ ಅಂಶ.

**ತೆರ (ವಧುದಕ್ಷಿಣೆ) :**

ಕಾನೂರು ಅಣ್ಣಯ್ಯಗೌಡರ ಸಂಸಾರ ನರಕ ಸದೃಶವಾಗಿತ್ತು. ರೋಗಿಷ್ಠೆ ಹೆಂಡತಿ, ಜಡ್ಡು ಹಿಡಿದ ಮಗಳು, ಮದುವೆಗೆ ಬಂದ ಮಗನಿಗೆ ತೆರ ತೆತ್ತು ಮದುವೆ ಮಾಡಿದ್ದರೆ ಅಡಿಗೆ ಮಾಡಲು ಹೆಣ್ಣು ಬರುತ್ತಿದ್ದಳು. ಮಗನಿಗೆ ಮದುವೆ ಮಾಡಿಸುವ ಬದಲಿಗೆ ಎಂಟುನೂರು ರೂಪಾಯಿ ತೆರ ತೆತ್ತು ಅಣ್ಣಯ್ಯ ಗೌಡರು ತಾನು ಮರು ಮದುವೆಯಾಗಿದ್ದು ಮಗ ಓಬಯ್ಯನಿಗೆ ಅಸಮಾಧಾನ ತಂದಿತ್ತು. ದುಡಿದದ್ದನ್ನೆಲ್ಲಾ ಅವಿವೇಕಿಯಾದ ತಂದೆ ದುಂದುವೆಚ್ಚ ಮಾಡಿದರೆ ಯಾವ ಮಗ ತಾನೇ ಸಹಿಸಿಯಾನು? ಅಣ್ಣಯ್ಯ ಗೌಡರು ಚಂದ್ರಯ್ಯ ಗೌಡರಿಂದ ಪಡೆದ ಸಾಲ ವಿಷದಂತೆ ಬೆಳೆಯುತ್ತಾ ಹೋಯಿತು. ಹೊಸತಲೆಮಾರಿನ ಓಬಯ್ಯ ಆರ್ಥಿಕತೆಯ ಬಗ್ಗೆ ಲೆಕ್ಕಾಚಾರ ಮಾಡುವ ವ್ಯಕ್ತಿ.

ತಲೆಗೆ ಎಣ್ಣೆ ಹಾಕುತ್ತಿದ್ದ ರಾಮಯ್ಯ ಪಟ್ಟಣದಿಂದ ತಂದ ತೈಲ ಹಚ್ಚುತ್ತಾನೆ. ಹೂವಯ್ಯನಿಗೆ ಟ್ರಂಕ್ ತಗಲಿದಾಗ ಅದನ್ನೇ ಹಚ್ಚುತ್ತಾನೆ. ಮನೆಯಲ್ಲಿ ಹರಳೆಣ್ಣೆ, ಕೊಬ್ಬರಿ ಎಣ್ಣೆ ಬಳಸುತ್ತಿದ್ದವನು ಹೊಸ ಆವಿಷ್ಕಾರದ ತೈಲವನ್ನು ಬಳಸುವುದು ವಿಶೇಷವಾಗಿತ್ತು.

**ರೇಷ್ಮೆ ಖಾಯಿಲೆ :**

ಹೂವಯ್ಯನ ತಂದೆಗೆ ಬಂದ ರೋಗ ಇದು. ಆ ನಾಡಿನ ಜನಕ್ಕೆ ಹೊಸತಾದುದರಿಂದ ಅದರ ಬಗ್ಗೆ ಪರಿಚಯವೇ ಇಲ್ಲದೆ ಅದರಿಂದ ರಕ್ಷಣೆಪಡೆಯುವಲ್ಲಿ ವಿಫಲವಾಗುತ್ತಾನೆ. ಜೊತೆಗೆ ವೆಂಕಪ್ಪಯ್ಯ ಜೋಯಿಸರು ಮಿತಿಮೀರಿದ ದೈವಿಕ ನಂಬಿಕೆಯಿಂದ ಅಜ್ಞಾನವನ್ನು ಬೋಧಿಸಿ ಚಳಿಗಾಳಿಗೆ ಬಿಟ್ಟು ಅವರನ್ನು ಸಾವಿಗೆ ದೂಡುತ್ತಾರೆ. ಪುರೋಹಿತಶಾಹಿಯ ಇಂಥ ದರ್ಬಾರನ್ನು ಕಾದಂಬರಿಗಳಲ್ಲಿ ನಾವು ಕಾಣುತ್ತೇವೆ. ಈ

ಕಾಯಿಲೆ ಅಣ್ಣಯ್ಯಗೌಡರ ಮಗಳಿಗೂ ಬಂದು ಆಕೆಯೂ ಜ್ವರದಿಂದ ನರಳಿ ನರಳಿ ಸಾಯುತ್ತಾಳೆ. ರೋಗ ಹೊಸತಾಗಿದ್ದೂ ಅದಕ್ಕೆ ಔಷಧಿ ಕಂಡುಕೊಳ್ಳುವಷ್ಟು ಪರಿಸ್ಥಿ ಸುಧಾರಿಸಿರಲಿಲ್ಲ ಎಂಬುದು ಇಲ್ಲಿ ಅರಿವಿಗೆ ಬರುತ್ತದೆ.

**ತಾಯತ :**

ವೆಂಕಪ್ಪಯ್ಯನವರು ಇಡೀ ಸುತ್ತ ಮುತ್ತಲ ಗ್ರಾಮಕ್ಕೆ ಅಜ್ಞಾನವನ್ನೇ ಬೋಧಿಸಿ ಬೂದಿ ತಾಯತ ಕಟ್ಟಿ ಎಲ್ಲ ರೋಗಗಳಿಗೂ ಮದ್ದು ನೀಡುತ್ತಾ ಬಂದಿರುತ್ತಾರೆ. ಆದರೆ ಹೂವಯ್ಯ ಅದನ್ನು ವಿರೋಧಿಸುತ್ತಾನೆ. ವಾಸು ತಾಯತ ಕಟ್ಟಿಕೊಳ್ಳಲು ಒಪ್ಪುವುದಿಲ್ಲ. ರಾಮಯ್ಯನ ಸಮ್ಮತಿಯಂತೆ ಸೀತೆಗೆ ಬರೆ ಎಳೆಯುತ್ತಾರೆ. ಪುರೋಹಿತಶಾಹಿಯ ಪ್ರಾಬಲ್ಯ ಇಡೀ ಮಲೆನಾಡಿಗೆ ವ್ಯಾಪಿಸುತ್ತದೆ. ಆದರೆ ಸುಶಿಕ್ಷಿತ ಹೂವಯ್ಯ ಮಾತ್ರ ಇಡೀ ವ್ಯವಸ್ಥೆಯನ್ನು ಬದಲಾಯಿಸುವ ಪ್ರಯತ್ನ ಮಾಡುತ್ತಾನೆ.

**ಹೊಸ ಶಿಕ್ಷಣ ಪದ್ಧತಿ :**

ಹಳ್ಳಿಯ ಕೂಲಿಮಠದಲ್ಲಿ ಓದುತ್ತಿದ್ದ ಆ ಪರಿಸರದ ಜನ ಆಧುನಿಕ ಶಿಕ್ಷಣ ಪದ್ಧತಿಯಿಂದ ಎಚ್ಚರಗೊಳ್ಳುತ್ತಾರೆ. ವಾಸು, ಬ್ರಾಹ್ಮಣ ಮಂಜಯ್ಯಭಟ್ಟರ ಮಗನಾದಿಯಾಗಿ ಮಿಷನರಿ ಶಾಲೆಯಲ್ಲಿ ಶಿಕ್ಷಣ ಪಡೆಯುತ್ತಾರೆ. ಮಲೆಗಳಲ್ಲಿ ಮದುಮಗಳುವಿನಲ್ಲಿ ಕ್ರೈಸ್ತರ ಆಗಮನದ ಪರಿಣಾಮ ಮಿಷನರಿ ಶಾಲೆಯನ್ನು ಕಟ್ಟುವುದು, ಬಾವಿ ತೋಡಿಸುವುದು, ಬೇಲಿ ಹಾಕುವುದು ಇತ್ಯಾದಿಗಳು ನಡೆಯುತ್ತವೆ. ಬ್ರಾಹ್ಮಣ ಶಿಕ್ಷಕರನ್ನೇ ನೇಮಿಸಲು ಮುಖ್ಯ ಕಾರಣ ಅವರು ಕಡಿಮೆ ಸಂಬಳಕ್ಕೆ ದುಡಿಯುತ್ತಾರೆ. ಹಾಗೂ ತಮ್ಮ ಧರ್ಮದವರೇ ಎಂಬ ಅಭಿಮಾನ ಮಲೆನಾಡಿಗರಲ್ಲಿ ಉಳಿಯುತ್ತದೆ ಎಂಬುದು.

**ಕನಸು :**

ಹೂವಯ್ಯ ಟ್ರಂಕ್ ತಗುಲಿ ನೋವಿನಿಂದ ಮುತ್ತಳ್ಳಿಯಲ್ಲಿ ಮಲಗಿದ್ದಾಗ, ಕುಕ್ಕನಹಳ್ಳಿ ಕೆರೆ ಮೇಲೆ ನಡೆದು ಹೋದಂತೆ, ಮೇಘಲೋಕದಲ್ಲಿ ಖೂನಿಯಾದಂತೆ, ರಕ್ತಪಾತವಾದಂತೆ, ಕೆರೆ ನಿಸ್ತರಂಗವಾದಂತೆ ಕನಸು ಕಾಣುತ್ತಾನೆ. ದೂರದಲ್ಲಿ ಯಾರೋ ಒಬ್ಬ ಸ್ತ್ರೀ ಬರುವಂತೆ ಕಾಣುತ್ತದೆ. ಅದು ತನ್ನ ತಾಯಿ ನಾಗಮ್ಮನೇ ಆಗಿದ್ದರು. ಹೂವಯ್ಯ ಆಕೆಯನ್ನು ಕರೆಯುತ್ತ ಮುಂದುವರಿಯುತ್ತಾನೆ. ನಾಗಮ್ಮ ಸಮೀಪಕ್ಕೆ ಬರುತ್ತಾರೆ. ಅವರ ಹಣೆಯಲ್ಲಿ ಗಾಯವಾಗಿ ರಕ್ತ ಸೋರುತ್ತಿದೆ. ಹೂವಯ್ಯ ಬೆಚ್ಚಿ ಬಿದ್ದು ಮೇಲೇಳುತ್ತಾನೆ.

ಮತ್ತೊಮ್ಮೆ ಹೂವಯ್ಯನಿಗೆ ಕಂಡ ಕನಸಿನಲ್ಲಿ ಅಗ್ರಹಾರದ ವೆಂಕಪ್ಪಯ್ಯ ಜೋಯಿಸರು ಬಚ್ಚಲು ಮನೆಯಲ್ಲಿ ಸ್ನಾನ ಮಾಡುತ್ತಿದ್ದರು. ಹೂವಯ್ಯ ಅವರ ಹಂಡೆ ಮುಟ್ಟಿದ್ದ. ಅಷ್ಟರಲ್ಲಿ ಜೋಯಿಸರು ಅಲ್ಲಿಗೆ ಓಡಿ ಬಂದು ಕ್ರೋಧದಿಂದ ದೊಣ್ಣೆ ಎತ್ತಿದ್ದರು. ಹೂವಯ್ಯ 'ತಡೆಯಿರಿ, ತಪ್ಪಾಯ್ತು ಕ್ಷಮಿಸಿ' ಎಂದು ಕೂಗಿಕೊಂಡರೂ ಅವರು ಬೆನ್ನಿಗೊಂದು ಪೆಟ್ಟು ಇಳಿಸಿಯೇ ಬಿಟ್ಟರು.

ಇಂಥ ಕನಸು ಹೂವಯ್ಯನ ಪಾಲಿಗೆ ನನಸಾಗುವುದು. ಹೂವಯ್ಯನಿಗೆ ಮುಂದಾಗುವ ಅನರ್ಥ ಘಟನೆ ಕನಸಿನಲ್ಲೆ ಕಾಣುತ್ತದೆ. ಇದು ಹೂವಯ್ಯನಂಥವರಿಗೆ ಮಾತ್ರ ಕಾಣಲು ಸಾಧ್ಯವಾಗುವ ಊಹನಾಶಕ್ತಿ. ಸಂಜಯ ಮನೆಯಲ್ಲೆ ಕುಳಿತು ಧೃತರಾಷ್ಟ್ರನಿಗೆ ಮಹಾಭಾರತದ ಸನ್ನಿವೇಶವನ್ನು ತಿಳಿಸುವಂತೆ ಮನೋವೈಜ್ಞಾನಿಕ ಶಕ್ತಿಯುಳ್ಳ ವ್ಯಕ್ತಿಗೆ ಇದು ಸಾಧ್ಯವಾಗುತ್ತದೆ. ಆದರೆ ಇದನ್ನು ದಿವ್ಯಜ್ಞಾನ ಎಂದು ತಿಳಿಯಬೇಕಾಗಿಲ್ಲ. ಇದು ಕೇವಲ ಆಕಸ್ಮಿಕ ಆಗಿರಲೂಬಹುದು.

ಸೀತೆ 'ಕೃಷ್ಣಪ್ಪನನ್ನು ಹುಲಿ ಹಿಡೀಲಿ' ಎಂದು ನಂಜನೊಂದಿಗೆ ಹೇಳುತ್ತಾಳೆ. ಸೀತೆ ಒಮ್ಮೆ ಮದುವೆಯ ಹೊಂಗನಸು ಕಾಣುತ್ತಿರುವಾಗ ಅಡಕೆಯ ಮರದಿಂದ ಹಾಳೆಯೊಂದು ಬಾಳೆ ಎಲೆ ಮೇಲೆ ಬಿದ್ದು ಬಾಳೆಎಲೆ ಹರಿದು ಹೋಗುತ್ತದೆ. ಅವಳ ಮದುವೆಯ ಕನಸು ನುಚ್ಚು ನೂರಾಗುತ್ತದೆ. ಕನಸಿಗೂ ನನಸಿಗೂ ಪರಸ್ಪರ ಸಂಬಂಧವಿದೆ ಎನ್ನುವುದಕ್ಕೆ ಸಂಬಂಧಪಟ್ಟ ಅನೇಕ ಬಗೆಯ ತಾತ್ತ್ವಿಕ ನೆಲೆಗಟ್ಟನ್ನು ಈ ಕಾಲದಲ್ಲಿ ಪ್ರಸ್ತುತ ಪಡಿಸಲಾಗುತ್ತದೆ. ಆದರೆ ಆಗ ಫ್ರಾಯ್ಡನಂಥವರು ಇಲ್ಲದೇನೇ ಕನಸಿಗೆ ಸಾಂಕೇತಿಕ ಅರ್ಥ ಕಲ್ಪಿಸಲಾಗುತ್ತಿತ್ತು.

ಸಿಂಗಪ್ಪ ಗೌಡರು ಮುತ್ತಳ್ಳಿಗೆ ಹೋಗುತ್ತಿದ್ದಾಗ ಜೇಬಿನಿಂದ ಮೂಗುವಸ್ತ್ರವನ್ನು ತೆಗೆಯುವ ಒಂದು ಸಂದರ್ಭ ಕಾನೂನು ಹೆಗ್ಗಡತಿ ಕಾದಂಬರಿಯಲ್ಲಿ ಬರುತ್ತದೆ. ಆಗ ಅವರ ಮಗ ಕೃಷ್ಣಪ್ಪನ ಜಾತಕವಿದ್ದ ಕಾಗದ ಕೆಳಗೆ ಬೀಳುತ್ತದೆ. ಅದು ರಾಮಯ್ಯನಿಗೆ ಸಿಕ್ಕಿದರೂ ಗಾಳಿಗೆ ಸಿಕ್ಕಿ ಹರಿದುಹೋಗುತ್ತದೆ. ಇದು ಕೃಷ್ಣಪ್ಪನ ಮದುವೆಯು ಮುರಿದು ಬೀಳುವ ಸಂಕೇತವಾಗಿದೆ. ಜಾತಕ ನೋಡಿ ಮದುವೆ ಮಾಡಿಸುವಷ್ಟು ಅಲ್ಲಿನ ಗೌಡ ಜನಾಂಗ ಮುಂದುವರಿದಿತ್ತಾದರೂ ಮೂಢನಂಬಿಕೆಗಳನ್ನು ತಲೆಮೇಲೆ ಹೊತ್ತು ನಡೆಯುವ ಪದ್ಧತಿಯಿಂದ ಅವರು ನರಳುತ್ತಿದ್ದರು.

**ಜಾತ್ಯತೀತತೆ:**

'ಕಾನೂರು ಹೆಗ್ಗಡಿತಿ'ಯಲ್ಲಿನ ನಂಜನ ಕೂಸನ್ನು ಎತ್ತಿಕೊಳ್ಳಲು ಲಕ್ಷ್ಮಿ ಮುಂದೆ ಬರುತ್ತಾಳೆ. ಆ ಕೂಸಿನ ಕೈಕಾಲು ಸಣ್ಣ, ಹೊಟ್ಟೆ ಡುಬ್ಬಣ್ಣ, ಮೂಗು ಸಿಂಬಳ ಸುರುಕ. ಕೈ, ಹೊಟ್ಟೆಯಲ್ಲೆಲ್ಲಾ ಕಜ್ಜಿಗಳು, ಯಾರೂ ಮುಟ್ಟದ ಆ ಮಗುವನ್ನು ಲಕ್ಷ್ಮಿ 'ರಂಗೀ, ಬಾರೆ ಬೆಲ್ಲ ಕೊಡುತ್ತೇನೆ' ಎಂದು ಎತ್ತಿಕೊಳ್ಳುತ್ತಾಳೆ. ನಂಜ ತಡೆದರೂ ಅಪ್ಪ ಬಯ್ಯುತ್ತಾರೆ ಎಂದರೂ ಲಕ್ಷ್ಮಿ ಬಾಗಿಲನ್ನು ದಾಟುತ್ತಾಳೆ. ಇಲ್ಲಿ ನವಜನಾಂಗದ ಮುಗ್ಧ ಹುಡುಗಿ ಲಕ್ಷ್ಮಿಗೆ ಮೇಲು ಜಾತಿ ಕೀಳು ಜಾತಿಗಳ ಭೇದಭಾವವಿಲ್ಲದ ಮನಸ್ಥಿತಿ ಇದೆ. ಆದ್ದರಿಂದಲೇ ಅದೊಂದು ಮಗು ಎಂದು ಪ್ರೀತಿಸುವ ಮನೋಭಾವವನ್ನು ಕಾಣಬಹುದು. ಸವಿತಾನಾಗಭೂಷಣರವರ 'ತಂಗಿ ಹುಟ್ಟಿದಳು' ಎಂಬ ಕವನದಲ್ಲಿ ಅಜ್ಜಿ, ಅಮ್ಮ, ಅಪ್ಪ ಯಾರಿಗೂ ಬೇಕಾಗದ ಆ ಮಗುವನ್ನು ಪುಟ್ಟಹುಡುಗಿ(ಅಕ್ಕ) ಎತ್ತಿ ಮುದ್ದಾಡಿ ಅಭಯ ನೀಡುತ್ತಾಳೆ. ಅಲ್ಲಿ ಹೆಣ್ಣಿಗೆ ಹೆಣ್ಣೆ ರಕ್ಷಣೆ ನೀಡಿ ಸಹಾನುಭೂತಿಯ ಶಕ್ತಿಯಾಗಬೇಕಾದ ಅನಿವಾರ್ಯತೆ ಎದ್ದು ತೋರುತ್ತದೆ. ಲಕ್ಷ್ಮಿಯ ಮನಸ್ಸು ಹೊಸ ಜನಾಂಗದ ಜಾತ್ಯತೀತ ಮನೋಭಾವದ ಪ್ರತೀಕವಾಗಿತ್ತು. (ಕಾ.ಹೆ. ಪು. ೧೭೦).

ಹೂವಯ್ಯ ನೋವಿನಿಂದ ಮಲಗಿದ್ದಾಗ ಮಧ್ಯಾಹ್ನದ ಬೇಸರ ಕಳೆಯಲು ಸೀತೆಗೆ ತನ್ನ ಪುಸ್ತಕಗಳನ್ನು ತರಲು ಹೇಳುತ್ತಾನೆ. ಆಕೆ ಕೆಲವು ಪುಸ್ತಕಗಳನ್ನು ತಂದು 'ಸತಿಯು ಪತಿಗೆ ತನ್ನ ಶಿಶುವನ್ನು ನೀಡುವ ರೀತಿಯಲ್ಲಿ' ನೀಡುತ್ತಾಳೆ. ಸೀತೆಯ ಬಳಿಯಿದ್ದ ಕಥೆ ಕಾದಂಬರಿಗೂ ಹೂವಯ್ಯನ ಆ ಆಂಗ್ಲ ಭಾಷೆಯ ಪುಸ್ತಕಗಳಿಗೂ ಇದ್ದ ವ್ಯತ್ಯಾಸ ಕಾಫಿತೋಟದ ಕೂಲಿಗೂ ಮಾಲೀಕನಿಗೂ ಇದ್ದ ವ್ಯತ್ಯಾಸದಂತಿತ್ತು ಎಂದು ಕುವೆಂಪುರವರು ಹೇಳುತ್ತಾರೆ. ಇಲ್ಲಿ ಆಂಗ್ಲ ಪುಸ್ತಕಗಳು ಬ್ರಿಟೀಷ್ ಸಾಮ್ರಾಜ್ಯಶಾಹಿ ಹಿಡಿತದ ದಬ್ಬಾಳಿಕೆಯನ್ನೂ ಸೀತೆ ಬಳಿ ಇದ್ದ ಪುಸ್ತಕಗಳು ಆಳಿಸಿಕೊಳ್ಳುವ ಭಾರತೀಯ ದಾಸ್ಯ ಪದ್ಧತಿಯನ್ನೂ ಸಾಂಕೇತಿಕವಾಗಿ ತಿಳಿಸುತ್ತದೆ ಎಂಬುದು ಕಾದಂಬರಿಕಾರರ ಅಭಿಮತ.

ಹೂವಯ್ಯ ಪುಸ್ತಕ ಓದುವಾಗಿನ ಸಮಾಧಿ ಸ್ಥಿತಿಯನ್ನು ತುಂಬಾ ಹತ್ತಿರದಿಂದ ಕಂಡ ಸೀತೆ ದೆವ್ವ ಹಿಡಿದದ್ದಲ್ಲ ಎಂದು ಖಾತರಿ ಮಾಡಿಕೊಳ್ಳುತ್ತಾಳೆ. ಅಷ್ಟೇ ಅಲ್ಲ ಅವನ ರಸಸಮಾಧಿಯ ದಿವ್ಯಸ್ಥಿತಿ ಕಂಡು ಅವನ ಮೇಲಿನ ಪ್ರೀತಿ ಇನ್ನೂ ಹೆಚ್ಚುತ್ತದೆ. ಆತನನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಇದಕ್ಕಿಂತ ಒಳ್ಳೆ ಅವಕಾಶ ಆಕೆಗೆ ಸಿಗುತ್ತಿರಲಿಲ್ಲ.

'ಪ್ರಾರ್ಥನೆ ಮಾಡಬೇಕು ಸೀತಾ ಪ್ರಾರ್ಥನೆ ಮಾಡಬೇಕು.' ದೇವರು ಈ ಪ್ರಪಂಚವನ್ನೆಲ್ಲಾ ನಿರ್ಮಿಸಿದ್ದಾನೆ. ನನ್ನನ್ನೂ ನಿನ್ನನ್ನೂ ಇತರರನ್ನೂ ನಿರ್ಮಿಸಿದ್ದಾನೆ, ನಮಗೆಷ್ಟೋ ಸುಖ ಸಂತೋಷ ಕೊಟ್ಟಿದ್ದಾನೆ. ನೀನು ಮುಡಿದುಕೊಂಡಿದ್ದೀಯಲ್ಲಾ ಆ ಹೂವುಗಳನ್ನೂ ಅವನೆ ಮಾಡಿದ್ದಾನೆ. ನಿನ್ನ ಮನೋಹರವಾದ ಕಣ್ಣುಗಳನ್ನೂ, ಕಣ್ಣುಗಳಿಲ್ಲದಿದ್ದರೆ ಏನಾಗುತ್ತಿತ್ತು. ನಾನು ನಿನ್ನನ್ನು ನೋಡಲಾಗುತ್ತಿರಲಿಲ್ಲ. ನೀನೂ ನನ್ನನ್ನು ನೋಡಲಾಗುತ್ತಿರಲಿಲ್ಲ. (ಪು. ೧೭೭ ಪೂರ್ಣ). ಹೂವಯ್ಯ, ಈ ಮೇಲಿನ ಮಾತಿನಲ್ಲಿನ ಆತನ ವಿದ್ವತ್ತು, ಆಧ್ಯಾತ್ಮಿಕತೆ ಬಿಂಬಿತವಾಗುತ್ತದೆ. ಇಲ್ಲಿ ಆತ್ಮ, ಪ್ರಾಣ, ಭಕ್ತಿ, ಭಗವಂತ, ಪ್ರಕೃತಿ, ಎಲ್ಲವನ್ನೂ ಆತ ಒಟ್ಟಿಗೆ ಪರಿಚಯಿಸುತ್ತಾನೆ. ಇದೆಲ್ಲವನ್ನೂ ಕ್ರಮೇಣ ಅರಿತ ಸೀತೆಯೂ ಆಲೋಚನೆಯ ಉತ್ತುಂಗ ಶ್ರೇಣಿ ಮುಟ್ಟುತ್ತಾಳೆ. ಆಧ್ಯಾತ್ಮಿಕ ಚಿಂತನೆಯ ಮುಖಾಂತರ ಹೂವಯ್ಯನ ಮಟ್ಟಕ್ಕೆ ಆಲೋಚನೆ ಮಾಡಲು ಆಕೆ ಯತ್ನಿಸಿ ದಿವ್ಯ ಭಾವಸಮಾಧಿಗೇರುತ್ತಾಳೆ. ಹೂವಯ್ಯನ ಆಲೋಚನಾ ಲಹರಿ, ಅವನ ಭಾವನೆ, ದೃಢ ಮನಸ್ಸು, ವಿಶಾಲ ಜ್ಞಾನದ ಮಟ್ಟವನ್ನು ಆಕೆ ಅರಿಯುತ್ತಾಳೆ. ಭಾರತೀಯ ಸಂಸ್ಕೃತಿಯ ಸಾರವನ್ನು ಧಾರೆಯೆರೆಯುವ ಪ್ರಯತ್ನ ಮಾಡಿ ಹೂವಯ್ಯ ಸೀತೆಯ ಮನಸ್ಸನ್ನು ಬದಲಾಯಿಸುತ್ತಾನೆ.

ಆಧುನಿಕ ಶಿಕ್ಷಣ ಪಡೆದ ರಾಮಯ್ಯನಿಗೆ ಕಾನೂರಿನ ಆ ಮನೆಯಲ್ಲಿ ಹೊಂದಿಕೊಳ್ಳುವುದೇ ಕಷ್ಟವಾಗುತ್ತಿತ್ತು. ಮನೆಯಲ್ಲಿ ಮಾತಾಡೋಣವೆಂದರೆ ವಾಸು, ಪುಟ್ಟಮ್ಮ, ಚಿಕ್ಕಮ್ಮನೂ ಇಲ್ಲ. ಅಪ್ಪನೊಂದಿಗೆ ಮೈಸೂರು, ಕಾಂಗ್ರೆಸ್, ಸ್ವರಾಜ್ಯದ ಚಳುವಳಿ ಇಂಥ ವಿಷಯಗಳ ಕುರಿತು ಮಾಡನಾಡತೊಡಗಿದರೆ ಅವರಿಗೆ ಅದಾವ ವಿಷಯದ ಬಗ್ಗೆಯೂ ಆಸಕ್ತಿಯಿಲ್ಲ. ಬಿಳಿ ಬಟ್ಟೆ, ಖಾದಿ ಟೋಪಿ, ಕಾಲುಮುಚ್ಚುವ ಉದ್ದಪಂಚೆಗಳನ್ನು ಅವಹೇಳನ ಮಾಡುವುದು ಅವರ ಜಾಯಮಾನ. ನೈರ್ಮಲ್ಯವೂ ಷೋಕಿಯೆಂಬುದೇ ಅವರ ವಾದ. ಇಲ್ಲಿ ರಾಮಯ್ಯನಿಗೆ ಹೊಂದಾಣಿಕೆ ಸಮಸ್ಯೆ ಕಾಡುತ್ತದೆ. ಹೂವಯ್ಯನಂತಹ ಒಳ್ಳೆ ಅಣ್ಣ, ಸ್ನೇಹಿತನಾಗುವುದು ಅವನ ಅದೃಷ್ಟ. ಆ ಮನೆಯಲ್ಲಿ ಹೆಚ್ಚಿನ ಬದಲಾವಣೆಗಳು ಕಾಣದಿದ್ದರೂ ಸುಬ್ಬಮ್ಮ ಆ ಮನೆಗೆ ಮಲತಾಯಿಯಾಗಿ ಬಂದದ್ದು ರಾಮಯ್ಯನಿಗೆ ಅಪಾರ ನೋವನ್ನುಂಟುಮಾಡಿತ್ತು. ಜೀವನದಲ್ಲಿ ಯಾವುದು ಆಗಬಾರದೆಂದು ಕೊಂಡಿದ್ದನೋ ಅದು ಆಗಿಯೇ ಬಿಟ್ಟಿತ್ತು. ಚಂದ್ರಯ್ಯಗೌಡರು ಹೂವಯ್ಯ ಸುಬ್ಬಮ್ಮನ ಸಂಬಂಧದ ಬಗ್ಗೆ ಸಂಶಯ ಪಟ್ಟಾಗ ಅವರ ಆ ಮುಖಭಾವವನ್ನು ರಾಮಯ್ಯ

ಅರ್ಥಮಾಡಿಕೊಂಡರೂ ಅದನ್ನು ವ್ಯಕ್ತಪಡಿಸವುದಿಲ್ಲ. ರಾಮಯ್ಯ ಮತ್ತು ಪುಟ್ಟಣ್ಣನನ್ನು 'ಕಬ್ಬಿನ ಹಿತ್ತಲಿಗೆ ಹೋಗೋಣ ಬನ್ನಿ' ಎಂದು ಕರೆದಾಗ ಇಬ್ಬರೂ ಚಂದ್ರಯ್ಯಗೌಡರನ್ನು ಹಿಂಬಾಲಿಸುವ ಕ್ರಿಯೆಯನ್ನು 'ನಿದ್ರೆ ಮಾಡುತ್ತಾ ಮೈಕೆರೆದುಕೊಳ್ಳುತ್ತಾ ಕುಳಿತ್ತಿದ್ದ ನಾಯಿಗಳು ಚಂದ್ರಯ್ಯ ಗೌಡರನ್ನು ಹಿಂಬಾಲಿಸಿದವು' ಎಂಬಂತೆ ವರ್ಣಿಸಲಾಗಿದೆ. ರಾಮಯ್ಯ ಆ ಹಳ್ಳಿಯಲ್ಲಿ ತನ್ನತನವನ್ನು ಹೀಗೆ ಕಳೆದುಕೊಳ್ಳುತ್ತಾನೆ.

**ಹೂವಯ್ಯನ ಮಾನವೀಯತೆ:**

ದಲಿತ ಗಂಗ ಎಂಬ ಹುಡುಗನು ಬಾಳೆಹಣ್ಣನ್ನು ಹುಲ್ಲಿನ ಪೊದೆಯಲ್ಲಿಟ್ಟು ಕದ್ದು ತಿನ್ನುವಾಗ ವಾಸಯ್ಯ ಬಂದು ನೋಡಿ ಸರಿಯಾದ ಶಿಕ್ಷೆ ಕೊಡಿಸುತ್ತೇನೆಂದುಕೊಂಡು ರಾಮಯ್ಯ ಹೂವಯ್ಯರನ್ನು ಕರೆಯುತ್ತಾನೆ. ಆದರೆ ಹೂವಯ್ಯ ಬಂದು ಇದ್ದ ಹಣ್ಣನ್ನೆಲ್ಲಾ ಎಲ್ಲರಿಗೂ ಹಂಚಿ ಉಳಿದ ಹಣ್ಣನ್ನು ಗಂಗನಿಗೆ ಕೊಡುತ್ತಾನೆ. ಇದು ಹೂವಯ್ಯನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಇಂತಹುದೇ ಇನ್ನೊಂದು ಪ್ರಸಂಗವನ್ನಿಲ್ಲಿ ಗಮನಿಸಬಹುದು. ಚಂದ್ರಯ್ಯಗೌಡರ ಆಳು ಬೈರನು ಉಳುತ್ತಿದ್ದಲ್ಲಿಗೆ ರಾಮಯ್ಯ, ಹೂವಯ್ಯರು ಬರುತ್ತಾರೆ. ಅವನಿಂದ ನೇಗಿಲನ್ನು ಪಡೆದು ತಾವು ಉಳುತ್ತಾರೆ.

ರಾಮಯ್ಯ ಉಳುತ್ತಿದ್ದ ಎತ್ತುಗಳು ಆತ ಉಟ್ಟ ಬಿಳಿ ಬಟ್ಟೆಯನ್ನು ನೋಡಿ ಬೆದರಿ ಓಡಿದವು. ರಾಮಯ್ಯ ನೇಗಿಲನ್ನು ಬದುವಿಗೆ ಆತು ನಿಲ್ಲಿಸುತ್ತಾನೆ. ಆದರೆ ನೇಗಿಲ ಈಚು ಮುರಿದು ಹೋಗುತ್ತದೆ. ಆದರೆ ಚಂದ್ರಯ್ಯಗೌಡರಿಗೆ ವಿಷಯ ತಿಳಿದು ಬೈರನಿಗೆ ಪಡಿಕೂಡಬಾರದೆಂದು ಆಜ್ಞೆ ವಿಧಿಸುತ್ತಾರೆ. ಚಂದ್ರಯ್ಯಗೌಡರ ಆಜ್ಞೆಮೀರಿ ಹೂವಯ್ಯ ಪಡಿ ಕೊಡಿಸುತ್ತಾನೆ. ಬೈರ ಪಡಿ ತೆಗೆದುಕೊಂಡು ಹೋಗುವಾಗ ಎದುರಿಗೆ ಚಂದ್ರಯ್ಯಗೌಡರು ಸಿಕ್ಕಿ 'ಯಾರಪ್ಪನ ಮನೆಗಂಟು? ಅಲ್ಲಿಟ್ಟು ಹೋಗು, ಆ ಭತ್ತಾನ' ಎಂದು ವಾಪಸ್ ಪಡೆದುಕೊಳ್ಳುತ್ತಾರೆ. ಇದನ್ನು ಅರಿತ ಹೂವಯ್ಯ ಬೈರನ ಮನೆಗೆ ತಾನೇ ಪಡಿ ಹೊತ್ತುಕೊಂಡು ಹೋಗಿ ಕೊಟ್ಟು ಬರುತ್ತಾನೆ. ಇಲ್ಲಿ ಹಳೆಯ ತಲೆಮಾರಿನ ಯಾಜಮಾನ್ಯಕ್ಕೆ ಹೊಸ ತಲೆಮಾರಿನ 'ಉದಾರವಾದ' ಹೊಸ ಸವಾಲೊಡ್ಡುವುದನ್ನು ಗುರುತಿಸಬಹುದು.

ಮಲೆನಾಡು ಆತಿಥ್ಯಕ್ಕೆ ಅಂದೇ ಪ್ರಸಿದ್ಧವಾಗಿತ್ತು. ಅದು ಹೂವಯ್ಯನ ಉದಾರತೆಯ ಹಳೆಯ ರೂಪ ಮಲೆನಾಡಿನ ಮನೆಗಳಿಗೆ ಯಾರಾದರೂ ನೆಂಟರು ಬಂದರೆ ಮೊದಲು ಕಾಲು ತೊಳೆಯಲು ನೀರು ಕೊಡುತ್ತಿದ್ದರು, ಆ ಮೇಲೆ ತಾಂಬೂಲ ನಿವೇದನೆ. ತರುವಾಯ

ಹುರಿದ ಮಾಂಸ ಅಥವಾ ಉಪ್ಪು ಮೀನು ಅಥವಾ ಉಪ್ಪಿನಕಾಯಿ ಇತ್ಯಾದಿ ಯಾವುದಾದರೊಂದು ವ್ಯಂಜನದ ಸಮೇತ ಹುಳಿ ಹುಳಿಯಾದ ಹೆಂಡವನ್ನು ಆದರ ಪೂರ್ವಕವಾಗಿ ಕೊಟ್ಟು ಸತ್ಕಾರ ಮಾಡುತ್ತಿದ್ದರು. ಆದರೆ ಇಂದು ಕಾಫಿ ಕುಡಿಯುವುದನ್ನು ನಾಗರಿಕತೆಯ ಚಿಹ್ನೆ ಎಂದೂ, ಗೌರವವೆಂದೂ ಭಾವಿಸುತ್ತಿದ್ದಾರೆ. ಇದಕ್ಕೆ ಎರಡೂ ಕಾದಂಬರಿಗಳಲ್ಲಿ ವಿಪುಲ ಉದಾಹರಣೆಗಳು ದೊರೆಯುತ್ತವೆ.

**ಸಂಶಯ :**

ಚಂದ್ರಯ್ಯ ಗೌಡರು ತರುಣಿ ಹೆಣ್ಣನ್ನು ಮದುವೆಯಾದರೂ ಹೆಚ್ಚು ಕಾಲ ಸುಖಪಡಲಾಗಲಿಲ್ಲ. ಸಂಶಯ ಒಮ್ಮೆ ಮುದಿ ಮಿದುಳನ್ನು ಪ್ರವೇಶಿಸಿತೆಂದರೆ ಒಣಗಿದ ಮರದ ಬುಡಕ್ಕೆ ಗೆದ್ದಲು ಹಿಡಿದಂತೆ. ಸುಬ್ಬಮ್ಮನ ಮೇಲೆ ದಿನದಿಂದ ದಿನಕ್ಕೆ ಸಂಶಯ ಜಾಸ್ತಿಯಾಗುತ್ತದೆ. ಸೇರೆಗಾರರ ಮೇಲೆ ಮತ್ತೆ ಚಂದ್ರಯ್ಯಗೌಡರು ಅನುಮಾನ ಪಡುತ್ತಾರೆ. ಆದರೆ ಗಂಗೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಸೇರೆಗಾರರನ್ನೂ ಉಳಿಸಿಕೊಳ್ಳುತ್ತಾರೆ. ಸೇರೆಗಾರ ಇದ್ದರೆ ಗಂಗೆಯು ಅಲ್ಲೇ ಇರುತ್ತಾಳೆ ಎಂಬ ಭಾವನೆಯಿಂದ ಎರೆಹುಳು ಹಾಕಿ ಮೀನು ಹಿಡಿಯುವುದು ಚಂದ್ರಯ್ಯಗೌಡರ ಉಪಾಯವಾಗಿತ್ತು. ಸುಬ್ಬಮ್ಮ ಆ ವೇಳೆಗೆ ಗೌಡರು ತಿಳಿದಷ್ಟು ಬದಲಾಗಿರಲಿಲ್ಲ. ಹೂವಯ್ಯ ಮನೆಗೆ ಬಂದಾಗಿನಿಂದ ಸುಬ್ಬಮ್ಮ ತನ್ನ ಒರಟುತನಕ್ಕೆ ತಾನೇ ಅಸಹ್ಯಪಟ್ಟುಕೊಂಡು ತಿದ್ದಿಕೊಳ್ಳತೊಡಗಿದಳು. ಹೂವಯ್ಯನ ಭದ್ರಾಕಾರವೂ ಗಂಭೀರ ವರ್ತನೆಯೂ ಆತನಲ್ಲಿದ್ದ ಒಂದು ವಿಧವಾದ ಗುರುಭಾವವೂ ಸುಬ್ಬಮ್ಮನ ಆರಾಧನೆಗೆ ಗುರಿಯಾದವು. ಆದರೆ ಗೌಡರು ತಮ್ಮ ಮನೆಯವರೆಲ್ಲಾ ಒಟ್ಟಾಗಿ ತಮ್ಮ ವಿರುದ್ಧ ಪಿತೂರಿ ನಡೆಸುತ್ತಿದ್ದಾರೆಂದು ಬಗೆದರು. ಹೂವಯ್ಯ ವಯಸ್ಸಿನಲ್ಲಿ, ಬುದ್ಧಿಯಲ್ಲಿ, ಸೌಂದರ್ಯದಲ್ಲಿ, ಶೀಲದಲ್ಲಿ ಎಲ್ಲದರಲ್ಲೂ ತಮಗಿಂತ ಮೇಲಾದುದರಿಂದ ಹೆಂಡತಿಯ ಮನಸ್ಸು ಅತ್ತ ಕಡೆ ತಿರುಗಿದೆ ಎಂದು ತಿಳಿದರು. ಇದಕ್ಕೆ ಪೂರಕವಾಗಿ ಆಳುಗಳೆಲ್ಲ ಸೇರಿ ಬೈರನಿಗೆ ಹೂವಯ್ಯ ಪಡಿಕೊಟ್ಟ ವಿಚಾರವಾಗಿ ಇಲ್ಲಸಲ್ಲದ್ದನ್ನು ಕಿವಿಯೂದಿದರು. ಇದನ್ನೆಲ್ಲ ಕಂಡ ಗೌಡರ ಸಂಶಯ ಪಿಶಾಚಿ ಹಾರಾಡತೊಡಗಿತು. ಹೆಜ್ಜೆಹೆಜ್ಜೆಗೂ ಹೂವಯ್ಯನ ಮೇಲೆ ಪ್ರತಿಕಾರ ತೀರಿಸಿಕೊಳ್ಳಲು ಗೌಡರು ಕಾಯುತ್ತಿದ್ದರು. ಸ್ವಪ್ರತಿಷ್ಠೆಯುಳ್ಳವರು ತಮ್ಮ ಎದುರೆ ಬೇರೆಯವರು ಬೆಳೆಯುವುದನ್ನು ಸಹಿಸಲಾರರು. 'ವಿನಾಶಕಾಲೇ ವಿಪರೀತ ಬುದ್ಧಿ' ಎಂಬ ಮಾತಿನಂತೆ ಚಂದ್ರಯ್ಯಗೌಡರದು ಹೊಟ್ಟೆ ಉರಿಯೇ ಆಗಿತ್ತು. ಇದು ಅವರ ವಿನಾಶಕ್ಕೆ ನಾಂದಿಯಾಯಿತು.

**ಇಂಗ್ಲೀಷ್ ಪ್ರವೇಶ:**

ಕೊಪ್ಪದ ಕಡೆಯಿಂದ ಬರುತ್ತಿದ್ದ ವ್ಯಕ್ತಿಯೊಬ್ಬನ ಬೈಸಿಕಲ್ ಶರವೇಗದಲ್ಲಿ ಬಂದು ಆಯ ತಪ್ಪಿ ದರೆಗೆ ಡಿಕ್ಕಿ ಹೊಡೆಯಿತು. ಹೂವಯ್ಯ ಸಹಾನುಭೂತಿ ತೋರಿಸುತ್ತಾ 'ಪೆಟ್ಟಾಯಿತೇನ್ರೀ?' ಎಂದು ಕೇಳುತ್ತಾನೆ. ಆ ವ್ಯಕ್ತಿ ತನ್ನ ಅಸ್ತವ್ಯಸ್ತ ಕ್ರಾಪನ್ನು ಒತ್ತಿಟ್ಟು "ಇಲ್ರೀ ಹೆಚ್ಚು ಏಟಾಗಲಿಲ್ಲ. ಏನು ಹಾಳು ರೋಡ್. ತೀರ್ಥಹಳ್ಳಿ ಕೊಪ್ಪ ರೋಡಿನಷ್ಟು ಡರ್ಟಿ ರೋಡ್ ನಾವೆಲ್ಲೂ ಕಾಣಲಿಲ್ಲ". ಎಂದು ಬೈಸಿಕಲನ್ನು ಪರೀಕ್ಷಿಸುತ್ತಾ ಟ್ರಿಂ ಟ್ರಿಂ ಎಂದು ಗಂಟೆ ಮಾಡಿದನು. ಬಿ.ಎಸ್.ಎ ಬೈಸಿಕಲ್ ಹಾಗೆಲ್ಲಾ ಡಿರೇಂಜ್ ಆಗೋದಿಲ್ಲ ಎಂದನು. ಆತ ಬಳಸುವ ಇಂಗ್ಲೀಷ್ ಪದಗಳು ನಾಗರಿಕ ಪ್ರಪಂಚದಲ್ಲಿ ಗಣನೆಗೂ ಬಾರದಿದ್ದರೂ ಆ ಬೈಸಿಕಲ್ ಹಳ್ಳಿಗಾಡಿನಲ್ಲಿ ಯಂತ್ರಮಾನವನ ನಾಗರಿಕ ಪ್ರಪಂಚದ ದರ್ಶನಮಾಡಿಸಿತು. ಆತ ಬಿಟ್ಟು ಹೋದ ಫೌಂಟೇನ್ ಪೆನ್ ಮೇಲೆ ಹಂಸವಿರುವ ಇಂಗ್ಲೀಷ್ ಅಕ್ಷರದ ಚಿತ್ರ ಹೊಸಸಮಾಜಕ್ಕೆ ನೀಡಿದ ಕೊಡುಗೆಯಾಗಿದೆ.

ಮುತ್ತಳ್ಳಿಯ ಚಿನ್ನಯ್ಯ ಪತ್ರ ಬರೆದು ಕಳುಹಿಸಿದ್ದನ್ನು ಕಂಡು ಹೂವಯ್ಯ ಸೀತೆಯ ಆರೋಗ್ಯ ವಿಚಾರಿಸಲು ಮುತ್ತಳ್ಳಿಗೆ ಬರುತ್ತಾನೆ. ಸೀತೆ ಮೊದಲಿನಂತೆ ಸಂತೋಷದಿಂದಿರುತ್ತಾಳೆ. ದೃಢನಿರ್ಧಾರ ಮಾಡಿ ಸೀತೆಯನ್ನು ಮದುವೆ ಮಾಡಿಕೊಡಿ ಎಂದು ಶಾಮಯ್ಯಗೌಡರಲ್ಲಿ ಕೇಳಲು ಎಷ್ಟೇ ಪ್ರಯತ್ನಪಟ್ಟರೂ ಸಮಯ ಸಂದರ್ಭಗಳು ಅಷ್ಟೊಂದು ಚೆನ್ನಾಗಿರಲಿಲ್ಲ. ಬೇರೆ ಯಾರಾದರೂ ಸಾಮಾನ್ಯ ವ್ಯಕ್ತಿಗಳಾಗಿದ್ದರೆ ಅದೇ ಸಂದರ್ಭವನ್ನು ಉಪಯೋಗಿಸಿ ಹೆಣ್ಣು ಕೇಳಿಬಿಡುತ್ತಿದ್ದರು. ಹೂವಯ್ಯ ಜ್ಞಾನಿ, ಸಮಯ ಸಂದರ್ಭಗಳನ್ನು ಅರ್ಥಮಾಡಿಕೊಂಡ ಸಂಯಮಿ, ಆದರ್ಶ ವ್ಯಕ್ತಿ. ಹಾಗಾಗಿ ದುಃಖದಲ್ಲಿದ್ದ ಶ್ಯಾಮಯ್ಯಗೌಡರನ್ನು ಕೇಳುವುದಕ್ಕೆ ಅದು ಸೂಕ್ತ ಸಮಯವಲ್ಲ ಎಂದುಕೊಳ್ಳುತ್ತಾನೆ. ಹೂವಯ್ಯನಲ್ಲಿ ಮನೆಮಾಡಿರುವ ಮಾನವೀಯತೆಯನ್ನು ಇಲ್ಲಿ ಗುರುತಿಸಬಹುದು.

ವರ್ಡ್ಸ್‌ವರ್ತ್ ನುಡಿದ ಭವಿಷ್ಯವನ್ನು ರಾಮಯ್ಯ ಹೀಗೆ ಹೇಳುತ್ತಾನೆ: Heaven lies about us in our infancy shades of two prison - house begin to close upon the growing boy. But he beholds the lightly and whence it flows (ಕಾ.ಹೆ. ಪು. ೩೨೯) ಇಂಗ್ಲೀಷ್ ಲೇಖಕರಾದ ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್‌ರ ಪ್ರಭಾವ ಹೂವಯ್ಯನ ಮೇಲೆ ಬೀರಿದೆ. ರಾಮಯ್ಯನೂ ಅದೇ ದಾರಿಯಲ್ಲಿ ಸಾಗುತ್ತಾನೆ.

ಚಂದ್ರಯ್ಯಗೌಡರ ಅಪ್ಪಣೆ ಮೇರೆಗೆ ವಾಸು ಕ್ರಾಪ್‌ತೆಗೆದು ಜುಟ್ಟು ಬಿಡಲು ಇಷ್ಟವಿಲ್ಲದೆ ಕೋಳಿ ಒಡ್ಡೆಲಿ ಅವಿತುಕೊಂಡಿದ್ದನು. ಪುಟ್ಟಮ್ಮ ಅವನನ್ನು ಬಲವಂತವಾಗಿ ಹಿಡಿದು ಕೂದಲು ಕತ್ತರಿಸಲು ಕಳುಹಿಸುತ್ತಾಳೆ. ಅದೂ ಅಪ್ಪನ ಅಧಿಕಾರವಾಣಿಗೆ ಹೆದರಿಕೊಂಡು. ಒಮ್ಮೆ ನಾಗರಿಕತೆಗೆ ಒಗ್ಗಿಕೊಂಡು ಮನಸುಕೊಟ್ಟ ಮೇಲೆ ಮತ್ತೆ ಹಿಂದೆ ಹೋಗಲು ಯಾರಿಗೂ ಮನಸ್ಸು ಒಗ್ಗದು. ಚಂದ್ರಯ್ಯಗೌಡರು ಇಡೀ ಕುಟುಂಬ ವ್ಯವಸ್ಥೆಯನ್ನು ಬಲವಂತವಾಗಿ ನಡೆಸಿಕೊಂಡು ಹೋಗಲು ಪ್ರಯತ್ನಿಸಿದಷ್ಟು ಇತರರಿಗೆ ಹಿಂಸೆಯಾಗಿ ಕಾಣುತ್ತದೆ.

**ಸಿದ್ದೆಗುಮ್ಮ (ಹೂದಲು ಹಾಕುವುದು):**

ಇದೊಂದು ಗ್ರಾಮೀಣ ಪ್ರದೇಶದಲ್ಲಿ ತುಂಟ ಮಕ್ಕಳಿಗೆ ಕೊಡುವ ಶಿಕ್ಷೆಯ ವಿಧಾನ. ಬೇರಾವುದಕ್ಕೂ ಸೋಲದವರು ಇದಕ್ಕೆ ಸೋಲಲೇಬೇಕು. ಮಕ್ಕಳ ಕೈಕಾಲುಗಳನ್ನು ಕಂಬಕ್ಕೆ ಕಟ್ಟಿ ಹೊಗೆಹಾಕಿ ಆ ಹೊಗೆಗೆ ಮೆಣಸಿನ ಕಾಯಿಯನ್ನು ಹಾಕಿದಾಗ ಅದರ ಘಾಟಿಗೆ ಶ್ವಾಸಕೋಶ ಕಟ್ಟಿ ಉಸಿರಾಡಲೂ ಕಷ್ಟವಾಗುತ್ತದೆ. ಇಂಥ ಶಿಕ್ಷೆಯನ್ನು ವಾಸುವಿಗೆ ನೀಡುತ್ತಾರೆ. ಆದರೆ ಆಧುನಿಕ ಶಿಕ್ಷಣ ವ್ಯವಸ್ಥೆಯಾದ ಪ್ರೈಮರಿ ಶಾಲೆಗಳಲ್ಲಿ ಇಂತಹ ಶಿಕ್ಷೆ ನೀಡುತ್ತಿರಲಿಲ್ಲ. ಏಕೆಂದರೆ ಮಕ್ಕಳಿಗೆ ಶಿಕ್ಷಣ ಶಿಕ್ಷೆಯಾಗಬಾರದು ಎನ್ನುವ ಕಾರಣಕ್ಕಾಗಿ.

**ಕಾನೂರು ಮನೆ ಪಾಲಾಗುವುದು**

ಪ್ರಾಚೀನ ಅರ್ವಾಚೀನಗಳ ಸಂಗಮವಾದ ಕಾನೂರಿನ ಮನೆ ಭವ್ಯ ಭಾರತಾಂಬೆಯ ನೆಲೆವೀಡು. ಕೂಡುಕುಟುಂಬಕ್ಕೆ ಹತ್ತಾರು ಹಳ್ಳಿಗೆ ಆದರ್ಶವಾದ ಮನೆ. ಅದನ್ನು ವಿಭಾಗ ಮಾಡುವುದೆಂದರೆ ಒಂದು ಸಂಸ್ಕೃತಿಯನ್ನೇ ವಿಭಾಗಮಾಡಿದಂತೆ.

'ಪಾಲು' ಸಂದರ್ಭದಲ್ಲಿ ಚಂದ್ರಯ್ಯಗೌಡರು ಕೇವಲ ಪಿತ್ರಾರ್ಜಿತ ಆಸ್ತಿ ಮಾತ್ರ ಪಾಲು ಹಂಚಿಕೆ ಮಾಡಬೇಕು. ಉಳಿದದ್ದೆಲ್ಲಾ ನಾನು ನನ್ನ ಕಷ್ಟಪಟ್ಟು ಬೆವರು ಸುರಿಸಿ ದುಡಿದದ್ದು ಎಂದು ಹೇಳುತ್ತಾರೆ. ಅದಕ್ಕೆ ಉತ್ತರವಾಗಿ ಹೂವಯ್ಯ ಚಂದ್ರಯ್ಯಗೌಡರ ಮಾತನ್ನು ಧಿಕ್ಕರಿಸಿ ಹೇಳುತ್ತಾನೆ. "ಸ್ವಯಾರ್ಜಿತ ಪಿತ್ರಾರ್ಜಿತ ಎಂದು ವಿಭಾಗ ಮಾಡುವುದು ನ್ಯಾಯವಲ್ಲ. ಒಂದು ಮನೆಗೆ ಯಜಮಾನನಾದವನು ಏನು ಸಂಪಾದನೆ ಮಾಡಿದರೂ ಅವು ಮನೆಯ ಸಂಪತ್ತಿಗೆ ಸೇರುತ್ತದೆ. ಯಜಮಾನನು ವಹಿವಾಟು ನಡೆಸುವಾಗ ಏನಾದರೂ ನಷ್ಟ ಸಂಭವಿಸಿದರೆ ಆ ನಷ್ಟವನ್ನು ತನ್ನೊಬ್ಬನ ಮೇಲೇಯೇ ಹಾಕಿಕೊಳ್ಳುತ್ತಾನೆಯೇ?

ಮನೆಯ ಲೆಖ್ಖಕ್ಕೆ ಖರ್ಚು ಹಾಕುವುದಿಲ್ಲವೇನು? ನಷ್ಟದಂತೆಯೇ ಲಾಭವೂ ಮನೆಯ ಆಸ್ತಿಗೆ ಸೇರತಕ್ಕದ್ದು. ಪಿತ್ರಾರ್ಜಿತವಾದ ಆಸ್ತಿಯ ಆಧಾರ, ಬೆಂಬಲ ಇವುಗಳೆಲ್ಲ ಇಲ್ಲದಿದ್ದರೆ ಯಜಮಾನನು ಹೊಸ ಆಸ್ತಿಯನ್ನು ಸಂಪಾದಿಸಲು ಸಾಧ್ಯವಾಗುತ್ತಿತ್ತೇ? ಸಂಪಾದಿಸಿದ ಆಸ್ತಿ ಪಿತ್ರಾರ್ಜಿತ ಆಸ್ತಿ ಎಂಬ ಮೂಲಧನದ ಮೇಲೆ ಬಂದ ಬಡ್ಡಿಯಂತೆಯೆ" ಎಂದು ವಾದಿಸುತ್ತಾನೆ. ಇದು ಆ ಕಾಲಕ್ಕೆ ತೀರ ಆಧುನಿಕವಾದ ಆಲೋಚನೆ.

ಇಷ್ಟಾದರೂ ಹೂವಯ್ಯನೆ ದೊಡ್ಡ ಮನಸ್ಸು ಮಾಡಿ ಆಸ್ತಿಯನ್ನು ಪಿತ್ರಾರ್ಜಿತ ಸ್ವಯಾರ್ಜಿತವೆಂದು ಪ್ರತ್ಯೇಕಿಸಲು ಒಪ್ಪಿಕೊಳ್ಳುತ್ತಾನೆ. ಅನಂತರ ಆಸ್ತಿಯನ್ನು ಹಂಚುತ್ತಾನೆ. 'ಸಿಂಗಪ್ಪಗೌಡರು ನೀನೆಂಥವನೋ ಎಲ್ಲದಕ್ಕೂ ಕೋಲೆ ಬಸವನ ಹಾಗೆ ತಲೆ ಅಲ್ಲಾಡಿಸುತ್ತಿಯಾ? ಅಂದಾಗ 'ಸುಖ ಇರುವುದು ಆಸ್ತಿಯಲ್ಲಲ್ಲ, ಎದೆಯಲ್ಲಿ' ಎಂದು ಹೂವಯ್ಯ ಹೇಳುತ್ತಾನೆ. (ಕಾ.ಹೆ. ಪು. ೩೧೦)

ಹೂವಯ್ಯ ನಿಜವಾದ ಹೃದಯವಂತ, ಅಷ್ಟೆ ವಿರಾಗಿ. ಜೊತೆಗೆ ಆಸ್ತಿಯ ಬಗ್ಗೆ ನಿಜವಾದ ಅನುಭವವಿದ್ದಿದ್ದರೆ ಆತ ಹಾಗೆ ಮಾಡಲು ಸಾಧ್ಯವೇ ಇಲ್ಲ. ಇಷ್ಟಕ್ಕೂ ಇದೊಂದು ವ್ಯವಹಾರ, ಅಂದರೆ ಹೂವಯ್ಯ ಎಷ್ಟೇ ಬುದ್ಧಿವಂತನಾದರೂ ಭಾವಜೀವಿ. ವ್ಯವಹಾರ ಜ್ಞಾನ ಕಮ್ಮಿ ಎಂದು ಹೇಳುವುದಕ್ಕಿಂತ ಆತನ 'ಉದಾರವಾದ'ವೇ ಹೆಚ್ಚು ಮೆರೆಯುತ್ತದೆ ಎನ್ನಬಹುದು.

**ಹೂವಯ್ಯ ಊರುಬಿಟ್ಟದ್ದು :**

ಚಂದ್ರಯ್ಯಗೌಡರ ಹೆಜ್ಜೆಹೆಜ್ಜೆಗಿನ ಉಪಟಳ ಅತಿಯಾದ ಕಾರಣ ಮನಸ್ಸಿಗೆ ಶಾಂತಿ ಬಯಸುವ, ಬೇರೆಯವರಿಗೆ ಪ್ರತಿಹಿಂಸೆ ನೀಡಲು ಬಯಸದ ಹೂವಯ್ಯ ಕಾನೂರನ್ನು ಬಿಟ್ಟು ಕೆಳಕಾನೂರಿಗೆ ಬರುತ್ತಾನೆ. ಅವನು ಮನೆ ಬಿಟ್ಟು ಹೊರಡುವಾಗ ರಾಮಯ್ಯ, ವಾಸು, ಸುಬ್ಬಮ್ಮ, ಪುಟ್ಟಮ್ಮ ಎಲ್ಲರೂ ಕಂಬನಿ ಮಿಡಿಯುತ್ತಾರೆ. ಒಂದು ರೀತಿ ರಾಘವಾಂಕನ ಹರಿಶ್ಚಂದ್ರ ಕಾವ್ಯದ ಸಾಲು ನೆನಪಿಗೆ ಬರುತ್ತದೆ.

ಪುರದಪುಣ್ಯಂ ಪುರುಷ ರೂಪಿಂದೆ ಪೋಗುತಿದೆ
ಪರಿಜನರ ಭಾಗ್ಯವಡವಿಗೆ ಪೋಗುತಿದೆ.

ಅಷ್ಟೇ ಅಲ್ಲ, ತನ್ನ ಪಾಲಿಗೆ ಬಂದಿದ್ದ ಡ್ಯೆಮಂಡು, ರೋಜಿ, ಕತ್ವಾಲ ಎಂಬ ನಾಯಿಗಳು ಹಿಂಬಾಲಿಸಿ ಬರುವುದು ಧರ್ಮರಾಯನ ಸ್ವರ್ಗಪ್ರವೇಶವನ್ನು ನೆನಪಿಸುತ್ತದೆ.

ಅಣ್ಣಯ್ಯ ಗೌಡರಿದ್ದ ಆ ಮನೆ ನೀರುಸೋರಿ ಕಸಬಿದ್ದು ದನಕರುಗಳು ಮಲಗುವ ಹಟ್ಟಿಯಾಗಿದ್ದದ್ದು ಹೂವಯ್ಯನ ಪ್ರವೇಶದಿಂದ ಬದಲಾಯಿತು. ಆತ ಹುಲ್ಲು ಹೊದಿಸಿದ, ಬಾವಿ ಶುಚಿಗೊಳಿಸಿದ, ಗೋಡೆಗಳಿಗೆ ಕೆಂಪು ಮಣ್ಣು ಬಳಿದು ನುಣುಪುಗೈದ. ಬಿಳಿ ಜೇಡಿ ಬಳಿದುದರಿಂದ ಮನೆಗೆ ಆಹ್ಲಾದಕರವಾದ ಕಾಂತಿ ಬಂದಿತ್ತು. ಹೊಗೆಯಿಂದ ಕೂಡಿದ ಭಾಗಗಳೆಲ್ಲ ಬೆಳಗಿದವು. ಕರಿಯಿಲ್ಲಣ ನೇತಾಡುತ್ತಿದ್ದ ತೊಲೆಗಳು ಚೊಕ್ಕಟವಾದವು. ಜೇಡರ ಬಲೆ, ಬಂಜೆಹುಳು ಮಾಯವಾದುವು. ಮನೆಯ ಸುತ್ತಲೂ ಬಿದ್ದಿರುತ್ತಿದ್ದ ಕಸ, ಸೊಪ್ಪುಸದೆಗಳೆಲ್ಲಾ ತೊಲಗಿ ಶುಚಿಯಾಯಿತು. ರೀಡಿಂಗ್‌ರೂಂ, ಲೈಬ್ರರಿ, ಆಶ್ರಮ, ಕ್ಲಬ್ಬು, ಮನೆ ಎಲ್ಲವೂ ಆಗಿ ಪರಿವರ್ತನೆಯಾಗಿತ್ತು. ಆಧುನಿಕ ಆವಶ್ಯಕತೆಗಳಿಗನುಗುಣವಾಗಿ ಎಲ್ಲವನ್ನೂ ಚೊಕ್ಕಟವಾಗಿಟ್ಟುಕೊಂಡಿದ್ದ ಹೂವಯ್ಯ.

**ಮನೋವೈಜ್ಞಾನಿಕತೆ :**

ಕಾನೂರುಮನೆ ಪಾಲಾಗುವಾಗ ವಾಸು ಪ್ರಜ್ಞೆ ತಪ್ಪಿ ಬೀಳುವುದು, ಗಂಗ ಭೂತದ ಭಯದಲ್ಲೇ ಸಾಯುವುದು, ಮನೋವೈಜ್ಞಾನಿಕತೆಗೆ ಒದಗಿದ ಸವಾಲಾಗಿದೆ. ಅವರ ಮನಸ್ಸಿನ ಭಯವೇ ಇಂಥ ಸ್ಥಿತಿಗಳಿಗೆ ಕಾರಣವಾಗಿತ್ತು. ಚಂದ್ರಯ್ಯಗೌಡರು ಕಾಗೆಗೆ ಬಂದೂಕಿನಿಂದ ಹೊಡೆಯುವುದು, ಸೇರೆಗಾರರಿಗೆ 'ನಾಳೆಯೇ ಈ ತೆಂಗಿನಮರ ಕಡಿಸಿ ಹಾಕಿ, ಎಂದು ಹೇಳುವುದು, ಡೊಲಿಯನ್ನು ಕೊಂದು ಹಾಕುವುದು, ಇಡೀ ಸನ್ನಿವೇಶಗಳು ಮನೋವೈಜ್ಞಾನಿಕ ದೃಷ್ಟಿಯಿಂದ ನೋಡಿದಾಗ ಭಯ, ಆತಂಕ, ಮುಂದಾಗಬಹುದಾದ ದುರಂತಗಳ ಭೀತಿಯಿಂದ ನಡೆದುದು ಎಂಬುದು ವ್ಯಕ್ತವಾಗುತ್ತದೆ. ಇವು ಮಲೆನಾಡು ಪ್ರದೇಶದಲ್ಲಿ ಮನೆಮಾಡಿದ್ದ ಮೂಢನಂಬಿಕೆಗಳನ್ನು ಬಿಂಬಿಸುತ್ತವೆ.

ಸೀತೆಯ ಮದುವೆ ರಾಮಯ್ಯನೊಂದಿಗೆ ನಿಶ್ಚಯವಾದಾಗ ಸಿಂಗಪ್ಪ ಗೌಡರು ಹಾರಾಡುತ್ತಾರೆ. ಮದುವೆ ನಿಲ್ಲಿಸುತ್ತೇನೆ, ಸೇಡುತೀರಿಸಿಕೊಳ್ಳುತ್ತೇನೆ ಎನ್ನುತ್ತಾರೆ. ಅದಕ್ಕೆ ಹೂವಯ್ಯ 'ಕಕ್ಕಯ್ಯ ನೀನು ನನಗಾಗಿ ಈ ದುರ್ವರ್ತನೆಗಳಲ್ಲಿ ತೊಡಗುವುದೂ ಬೇಡ. ಹೆಣ್ಣಿನ ತಂದೆತಾಯಿಗಳೂ ಗಂಡಿನ ತಂದೆತಾಯಿಗಳೂ ಒಪ್ಪಿದ ಮೇಲೆ ಅದನ್ನು ತಡೆಯುವ ಹಕ್ಕು ಯಾರಿಗೂ ಇಲ್ಲ, ನೀನೇನಾದರೂ ಕ್ರೂರ ಕರ್ಮ ಮಾಡಿದರೆ ಅಥವಾ ಮಾಡಿಸಿದರೆ ಅದಕ್ಕೆ ನಾನೇ ಹೊಣೆಯಾಗಿ ಕಷ್ಟ ಪರಂಪರೆಗಳನ್ನು ಎದುರಿಸಬೇಕಾಗುತ್ತದೆ' ಎನ್ನುತ್ತಾನೆ. ಎಷ್ಟು ಜನಕ್ಕೆ ಇಂಥ ಒಳ್ಳೆಯ ಮನೋಭಾವ ಇರುತ್ತದೆ? ಹೆಣ್ಣಿಗಾಗಿ ಕೊಲೆ, ಸುಲಿಗೆ ಮಾಡುವಂತಹ ಸನ್ನಿವೇಶದಲ್ಲಿ ಹೂವಯ್ಯನಂಥವರು ತಾನು ಮೆಚ್ಚಿದ ಹುಡುಗಿಯನ್ನು

ತ್ಯಾಗ ಮಾಡುತ್ತಾನೆ. ಇದು ತ್ಯಾಗವೋ ಅಥವಾ ವಿರಕ್ತಿಯೋ ಎಂಬ ದ್ವಂದ್ವವೂ ಇಲ್ಲಿ ಕಂಡುಬರುತ್ತದೆ.

ಹೂವಯ್ಯನು ತಾನೊಬ್ಬನೆ ಸಂತೋಷವಾಗಿರಬೇಕು ಎಂದು ಎಂದೂ ಬಯಸಿದ್ದಿಲ್ಲ. ಇಡೀ ಮಲೆನಾಡನ್ನು ಉದ್ಧಾರ ಮಾಡಬೇಕು ಎಂಬುದು ಅವನ ಆಸೆ. ಅದಕ್ಕಾಗಿ ಸಿಂಗಪ್ಪನ ಸಹಾಯ ಬೇಡುವನು. 'ಇಡೀ ಮಲೆನಾಡಿನಲ್ಲೆಲ್ಲಾ ಸ್ವರ್ಗ ಸ್ಥಾಪನೆ ಮಾಡಬೇಕು' ಎಂದು ಬಯಸುತ್ತಾನೆ. ಹೂವಯ್ಯನ ಪ್ರಭಾವ ಸೀತೆಯ ಮೇಲೆ ಎಷ್ಟರ ಮಟ್ಟಿಗೆ ಆಗಿತ್ತು ಎಂದರೆ ಆಕೆ ಕನಸಿನಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸಿದ್ದರೂ ಹೂವಯ್ಯನ ಆದರ್ಶದ 'ಪ್ರಾರ್ಥನೆ ಮಾಡಬೇಕು, ಸೀತಾ ಪ್ರಾರ್ಥನೆ ಮಾಡಬೇಕು' ಎಂಬ ಮಾತಿನಿಂದ ಜಾಗೃತಳಾಗುತ್ತಾಳೆ. ಅಷ್ಟರಮಟ್ಟಿಗೆ ಹೂವಯ್ಯನ ಪ್ರಭಾವ ಸೀತೆಯನ್ನೂ ಒಳಗೊಂಡು ಇಡೀ ಸಮಾಜದ ಮೇಲೆ ಆಗುತ್ತದೆ.

**ಪೋಲೀಸ್ ಪ್ರವೇಶ:**

ಎಂದೂ ಬಾರದ ಪೋಲೀಸರು ಅಂದು ಮುತ್ತಳ್ಳಿಗೆ ಪ್ರವೇಶಿಸುತ್ತಾರೆ. ಕದಿನಿಮಸಿ ಚೀಲಕ್ಕೆ ಕಿಡಿಬಿದ್ದು ಸಿಡಿದು ಇಬ್ಬರು ಮಡಿದುದನ್ನು ಮಹಜರು ಮಾಡಲು ಅವರು ಬರುತ್ತಾರೆ. ಇನ್ನು ಊರಿಗೆ ಪೋಲೀಸರು ಹೊಸದಾಗಿ ಬಂದರೂ ಚಂದ್ರಯ್ಯಗೌಡರ ದೃಷ್ಟಿಯಲ್ಲಿ ಅದು ಚಿಲ್ಲರೆ ವಿಷಯವಾಗಿತ್ತು. 'ಈ ಇನ್ಸ್‌ಪೆಕ್ಟರ್, ಈ ಪೋಲೀಸು ಇವರೇನು ನಾ ಕಾಣದವರೇ' ಎಂಬ ಹಂತಕ್ಕೆ ಗೌಡರ ದರ್ಪ ನಡೆಯುತ್ತಿತ್ತು. ಅವರ ಬೂಟ್ಸ್, ಬೆಲ್ಟ್, ಹಿತ್ತಾಳೆ ಗುಂಡಿಗಳು, ಬೆಟ್ಟಿಗೆ(ಬೆರಳು) ಸಿಕ್ಕಿಸಿರುವ ದೊಣ್ಣೆ ಇವೆಲ್ಲ ಸಾಮಾನ್ಯರಿಗೆ ಕ್ರೂರವಾಗಿ ಕಂಡರೂ ಹಳ್ಳಿಗೆ ಬಂದ ವೈದ್ಯರ ಸೌಮ್ಯವೇಷ ರಾಕ್ಷಸರ ಮಧ್ಯೆ ದೇವತೆಗಳಂತೆ ಕಂಗೊಳಿಸುತ್ತಿದ್ದು ಹಳ್ಳಿ ಜನರಿಗೆ ಸಮಾಧಾನ ತರುತ್ತಿತ್ತು, ಕಾಕ ಸಮೂಹದೊಳಗಿದ್ದ ಕೋಗಿಲೆಯ ನೆನಪಾಗುತ್ತಿತ್ತು.

ಪುರೋಹಿತಶಾಹಿ ತತ್ವಗಳು ಹೆಚ್ಚಾಗಿ ಸ್ವಾರ್ಥದಿಂದಲೇ ಕೂಡಿದ್ದು ಸೀತೆಗದು ರೌರವ ನರಕವಾಗಿತ್ತು. ವೆಂಕಪ್ಪಯ್ಯ ಜೋಯಿಸರು ದೇವಸ್ಥಾನದಲ್ಲಿ ಪ್ರವಾಚಿಸುವ ಶಾಸ್ತ್ರ, ದೇವರು, ಧರ್ಮ, ವಿವಾಹವಿಧಿ, ಪತಿವ್ರತಾ ಧರ್ಮ, ಪತ್ನಿಗೆ ಪತಿಯೇ ದೈವ ಇಂಥ ಬೋಧನೆ ಸೀತೆಗೆ ಹಿಡಿಸಲಾರದ ವಿಷಯವಾಗಿತ್ತು. ರಾಮಯ್ಯನಿಗೆ ಆ ಸನ್ನಿವೇಶದಲ್ಲಿ ವೆಂಕಪ್ಪಯ್ಯನವರು ಧರ್ಮವೀರರಾಗಿ ಕಂಡು ಬರುತ್ತಿದ್ದರು. ಏಕೆಂದರೆ ಅದು ಅವನ ಕರ್ತವ್ಯಗಳನ್ನು ಕುರಿತು ಹೇಳದೆ ಹಕ್ಕು ಬಾಧ್ಯತೆಗಳನ್ನು ಕುರಿತು ಪ್ರಸ್ತಾಪಿಸಿ ತನ್ನ ಪರ ವಾದಿಸುವಂತೆ ಕೇಳಿಸುತ್ತಿತ್ತು.

**ಕೋಳಿಅಂಕ :**

ಚಂದ್ರಯ್ಯಗೌಡರು ಧರ್ಮಸ್ಥಳದ ತೀರ್ಥಯಾತ್ರೆಗೆ ಹೋಗಿದ್ದಾಗ ಅವರ ಮನೆ ಗಂಗೆ ಸೇರೆಗಾರರ ನೇತೃತ್ವದಲ್ಲಿತ್ತು. ತಿಂದು, ಕುಡಿದು ನೆತ್ತಿಗೇರಿ, ತಾಳಮದ್ದಳೆ ಮಾಡುವುದು. ಭಾಗವತರಾಟ ಕುಣಿಯುವುದು, ಇಸ್ಪೀಟಾಟ ಆಡುವುದು ಹೀಗೆ ವಿವಿಧ ಅಂಕಗಳ ಕೇಂದ್ರವಾಗಿತ್ತು. ಕೋಳಿಅಂಕವೂ ಸೇರೆಗಾರರ ಪ್ರಿಯ ಹವ್ಯಾಸಗಳಲ್ಲೊಂದಾಗಿತ್ತು.

ಕೋಳಿಅಂಕವು ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಕ್ರೀಡೆ. ಕನ್ನಡ ಜಿಲ್ಲೆಯಿಂದ ಹೋದ ಸೇರೆಗಾರ ರಂಗಪ್ಪ ಸೆಟ್ಟರು ಮಲೆನಾಡಿನಲ್ಲಿ ಅದನ್ನು ತಮ್ಮ ಆಳುಗಳಿಗೆ ಪರಿಚಯಿಸಿ ಆಡುತ್ತಿದ್ದರು. ಮನೆಯಲ್ಲಿ ಯಜಮಾನನಿಲ್ಲದಿದ್ದರೆ ಸೇರೆಗಾರರೆ ಎಲ್ಲಾ ಆಗಿಬಿಡುತ್ತಿದ್ದರು. ಕದ್ದು ಅಡಿಕೆ, ತೆಂಗು, ಕೋಳಿಗಳನ್ನು ಮಾರುತ್ತಿದ್ದರು. ಕೇವಲ ವ್ಯಾಪಾರಕ್ಕಾಗಿ ಬಂದ ಬ್ರಿಟೀಷರು ಇಲ್ಲಿನ ಆಡಳಿತ ವ್ಯವಸ್ಥೆಯನ್ನು ಕೈಯಲ್ಲಿ ಹಿಡಿದುಕೊಂಡಂತೆ ಸೇರೆಗಾರರ ವರ್ತನೆ ಕಂಡು ಬರುತ್ತದೆ. ಕೋಳಿ ಅಂಕಕ್ಕೆ ಸೇರೆಗಾರರ ಆಗಮನದ ರೀತಿ ವಿಚಿತ್ರವಾಗಿರುತ್ತಿತ್ತು. ಕ್ಷೌರಮಾಡಿಸಿದ್ದ ಗುಳಿಕೆನ್ನೆ, ಕರಿಯಕೋಟು, ಮೊಣಕಾಲಿನಿಂದ ಕೆಳಗೆ ಇಳಿಬಿಟ್ಟ ಕಚ್ಚೆ, ಕಾಲಿನಲ್ಲಿದ್ದ ಬೆಳ್ಳಿಯ ಸರಿಗೆ, ತಳುಕಿನ ಮೆಟ್ಟುಗಳು, ಕೈಯಲ್ಲಿ ಹಿಡಿದಿದ್ದ ಬೆಳ್ಳಿಕಟ್ಟಿನ ಬೆತ್ತ-ಒಂದೊಂದೂ ಆ ಕಾಲಕ್ಕಿಂತ ಭಿನ್ನವಾಗಿ ನೆಲೆಯ ನಾಗರಿಕತೆಯನ್ನು ಪ್ರದರ್ಶಿಸುತ್ತಿದ್ದು ಸೇರೆಗಾರರು ನೆರೆದಿದ್ದವರಿಗೆ ಆದರ್ಶವಾಗಿ ಕಾಣುತ್ತಿದ್ದರು. ಅವರ ಹೂ ಮುಡಿದ ಜಡೆ ಹೋಗಿ ನವೀನತೆ ಕಂಗೊಳಿಸುತ್ತಿತ್ತು.

**ನಂಬಿಕೆಗಳು:**

ಕಳ್ಳತನ ಪತ್ತೆಹಚ್ಚಲು ಮಲೆನಾಡಿನಲ್ಲಿ ಬಳಸಲಾಗುತ್ತಿದ್ದ ವಿಧಿವಿಧಾನಗಳು ಮೂಢನಂಬಿಕೆಯನ್ನು ಸಾರುತ್ತಿದ್ದವು. ಮಲೆನಾಡಿನಲ್ಲಿ ತುಪ್ಪದಲ್ಲಿ ಅದ್ದಿದ ಹತ್ತಿಯ ಬತ್ತಿಗಳನ್ನು ಹಾಕಿ ಸೊಡರು ಹೊತ್ತಿಸಿ ತುಳಸಿ ಕಟ್ಟೆಮೇಲೆ ಸಾಲಾಗಿ ಇಟ್ಟು ಪ್ರದಕ್ಷಿಣೆ ಬಂದು ಬಳಿಕ ಕಳ್ಳ ನೆನಿಸಿದಾತ ದೀಪ ಆರಿಸಿದರೆ ಅಂಥವರು ಕಳ್ಳರಲ್ಲ ಎಂದು ಭಾವಿಸಲಾಗುತ್ತಿತ್ತು. ಸೋಮನ ಹಣವನ್ನು ಕದ್ದರು ಎಂಬ ಕಾರಣಕ್ಕಾಗಿ ಸೇರೆಗಾರರು ಹಳೆ ಪೈಕದ ತಿಮ್ಮ ಮತ್ತು ಕಳ್ಳಂಗಡಿಯವನಿಗೆ ಈ ಶಿಕ್ಷೆ ವಿಧಿಸುತ್ತಾನೆ.

ಸೀತೆ ನಡುರಾತ್ರಿ ಒಬ್ಬಂಟಿಯಾಗಿ ಹೂವಯ್ಯನನ್ನು ಹುಡುಕಿ ಬಂದಾಗ ಹೂವಯ್ಯನಿಗೆ ವಯೋಗುಣ ಸಹಜವಾದ ಆಸೆ ಆಕಾಂಕ್ಷೆಗಳಿದ್ದುದೆಲ್ಲ ನಿಜ. ಆದರೆ

ಆಕೆಯನ್ನು ಬಯಸಲಿಲ್ಲ. ಇಬ್ಬರು ಸಮಾನ ವಯಸ್ಕರು ಒಂದೇ ಕೋಣೆಯಲ್ಲಿ ಇಡೀ ರಾತ್ರಿ ಇದ್ದರೂ ಯಾವುದೇ ಅಚಾತುರ್ಯ ನಡೆಯುವುದಿಲ್ಲ. ಇವರದು ನಿಷ್ಕಲ್ಮಷ ಪ್ರೀತಿ. ನಾಗವರ್ಮನ ಕಾದಂಬರಿಯ ಮಹಾಶ್ವೇತೆಯನ್ನು ಚಂದ್ರಾಪೀಡ ಕಾಡಿನಲ್ಲಿ ಸಂಧಿಸಿದರೂ ಯಾವ ಕೆಟ್ಟ ಭಾವನೆಯೂ ಆತನಿಗೆ ಬರಲಿಲ್ಲ. ಚಂದ್ರೇಗೌಡನ ಸ್ವಭಾವ ಅಥವಾ ಸೇರೆಗಾರನ ನಡತೆಗಳು ಹೂವಯ್ಯನ ನಡತೆಯಷ್ಟು ಪ್ರಾಮಾಣಿಕವಾದದ್ದಾಗಿರಲಿಲ್ಲ. ಅದಕ್ಕೆ ಕಾರಣ ಆ ಕಾಲದ ವಿದ್ಯಾಭ್ಯಾಸದಲ್ಲಿದ್ದ ಮೌಲ್ಯ ಪ್ರತಿಪಾದನೆಯೂ ಆಗಿರಬಹುದು.

ಹೂವಯ್ಯನ ತಾಯಿ ನಾಗಮ್ಮ ಬಲೀಂದ್ರನಿಗೆ ಬಲಿಕೊಡಬೇಕೆಂಬ ಮಹಾತ್ವಾಕಾಂಕ್ಷೆ ಇಟ್ಟುಕೊಂಡಿದ್ದರು. ಅವರ ಸಾವಿನ ಸನ್ನಿವೇಶದಲ್ಲಿ ಮಗನಿಂದ ಭಾಷೆ ತೆಗೆದುಕೊಳ್ಳುತ್ತಾ ಪ್ರಪ್ರಥಮ ಬಾರಿಗೆ ಗೆಲುವು ಸಾಧಿಸಿದೆನೆಂದುಕೊಂಡರೂ ಅದು ಗೆಲುವಾಗಿರಲಿಲ್ಲ. ಹೂವಯ್ಯ ತಾಯಿಯ ಮೇಲಿನ ಪ್ರೀತಿಗಾಗಿ ಬಲಿಕೊಡಲು ಒಪ್ಪಿಕೊಂಡನೇ ಹೊರತು ಭೂತಕ್ಕೆ ಹೆದರಿ ಅಲ್ಲ. ಭೂತಕ್ಕೆ ಹೆದರುವಷ್ಟು ಸಂಕುಚಿತತೆ ಆತನಲ್ಲಿರಲಿಲ್ಲ.

ಖಳನಾಯಕರಂತಿದ್ದ ಚಂದ್ರಯ್ಯಗೌಡರು ಹಾಸಿಗೆ ಹಿಡಿಯುತ್ತಾರೆ. ಆಗ ಸುಬ್ಬಮ್ಮನ ಹೊರತು ಅವರಿಗೆ ಬೇರಾರೂ ಬೇಡವಾಗಿತ್ತು. ಸಾವಿನ ಅಂಚಿನಲ್ಲಿರುವವರು. ನಿಜಹೇಳುತ್ತಾರೆಂಬುದು ಚಂದ್ರಯ್ಯಗೌಡರ ಮಾತಿನಲ್ಲೂ ವ್ಯಕ್ತವಾಗುತ್ತಿತ್ತು. ಚಂದ್ರಯ್ಯ ಗೌಡರು ನಿಜವಾಗಿಯೂ ಆಗ ಪಾಪಬೀರುವೇ ಆಗಿದ್ದರು. ಸುಬ್ಬಮ್ಮನ ಬಗ್ಗೆಯೂ ಪಶ್ಚಾತ್ತಾಪ ವ್ಯಕ್ತಪಡಿಸುತ್ತಾರೆ. ಹೂವಯ್ಯ ಅವರನ್ನು ನೋಡಲು ಬಂದಾಗ ಕಣ್ಣೀರಿನ ಕೋಡಿಯನ್ನು ಹರಿಸಿ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಾರೆ. ಅಷ್ಟೇ ಅಲ್ಲ, ಆತ ಅಲ್ಲಿಂದ ಹೊರಡುವಾಗ ಕ್ಷಮೆ ಕೇಳುವವರಂತೆ ಎರಡೂ ಕೈ ಮುಗಿದು ಅವನನ್ನು ಬೀಳ್ಕೊಡುತ್ತಾರೆ. ಮನುಷ್ಯ ಎಷ್ಟೇ ಕ್ರೂರಿಯಾಗಿದ್ದರೂ ಸಾವು ಆತನನ್ನು ಮನುಷ್ಯನನ್ನಾಗಿ ಮಾಡುತ್ತದೆ.

**ಹೂವಯ್ಯನ ಪ್ರತಿಜ್ಞೆ:**

ತಾಯಿ ತೀರಿಹೋದಾಗ ಮದುವೆಯಾಗುತ್ತೇನೆಂದು ಹೂವಯ್ಯ ತನ್ನ ತಾಯಿಗೆ ಭಾಷೆ ಕೊಟ್ಟಿರುತ್ತಾನೆ. ಆದರೆ ಅವನ ದೃಷ್ಟಿಯಲ್ಲಿ ಸೀತೆಯನ್ನು ಎಂದೋ ಆತ್ಮದಲ್ಲಿ ಮದುವೆಯೂ ಆಗಿದ್ದಾನೆ. ಸಿಂಗಪ್ಪ ಗೌಡ 'ಕೂಡಿಕೆ' ಮಾಡಿಕೊಳ್ಳುತ್ತೀಯಾ ಎಂದು ಕೇಳಿದಾಗ ಅತಿಯಾಗಿ ಮನನೊಂದುಕೊಳ್ಳುತ್ತಾನೆ. ಸೀತೆಯನ್ನು ರಕ್ಷಿಸಲೋಸುಗ ಆತ ಗಡ್ಡ ಬಿಟ್ಟುಕೊಂಡು ಮನಸಾರೆ ಒಂದು ನಿರ್ಧಾರಕ್ಕೆ ಬರುತ್ತಾನೆ. ಆಕೆಯ ಆತ್ಮ ಸಾಯದಂತೆ ನೋಡಿಕೊಳ್ಳುವುದೇ ಆತನ ಉದ್ದೇಶವಾಗಿರುತ್ತದೆ.

ಹೂವಯ್ಯ ಬುದ್ಧನಂತೆ ಹೊಳೆ ದಂಡೆಯಲ್ಲಿ ಕುಳಿತು ಧ್ಯಾನ ಮಾಡುತ್ತಿರುತ್ತಾನೆ. ಬಿಟ್ಟ ಗಡ್ಡ ಕೂದಲು ಎಲ್ಲಾ ತೆಗೆಸಿದ್ದಾನೆ. ಬುದ್ಧನ ತತ್ವಗಳನ್ನು, ವಿಚಾರ, ಆದರ್ಶಗಳನ್ನು ಸ್ಮರಿಸುತ್ತಾ ಪ್ರತಿಜ್ಞೆ ಮಾಡುತ್ತಾನೆ. ರಾಮಯ್ಯನ ಜೀವನವನ್ನು ಸರಿಮಾಡುವುದು. ಸೀತೆಯನ್ನು ರಾಮಯ್ಯನೊಂದಿಗೆ ಸೇರಿಸಲು ಪ್ರಯತ್ನಿಸುವುದು.

ಪ್ರೀತಿಯ ಇನ್ನೊಂದು ಮುಖ ತ್ಯಾಗ ಎಂಬುದನ್ನು ಸಾಧಿಸಿತೋರಿಸುತ್ತಾನೆ ಹೂವಯ್ಯ.

ಮುಂದಿನ ವರ್ಷದಿಂದ ಘಟ್ಟದ ಕೆಳಗಿನಿಂದ ಆಳು ತರಿಸಿ ಸೇರೆಗಾರಿಕೆ ಮಾಡಿಸಲು ಹೂವಯ್ಯ ಸೋಮನಿಗೆ ಮುಂಗಡ ಹಣ ಕೊಡುತ್ತಾನೆ. ಹೂವಯ್ಯ ತನಗೆ ಹೊಂದಿಕೊಂಡವರನ್ನೆಲ್ಲಾ ಉದ್ಧಾರಮಾಡಲು ಹುಟ್ಟಿಕೊಂಡ ಮಹಾನ್ ಪುರುಷನಂತೆ ಕಾಣಿಸುತ್ತಾನೆ. ನಂಜ ಹೂವಯ್ಯನೊಂದಿಗೆ ಮುತ್ತಳ್ಳಿಗೆ ಹೋಗುವಾಗ 'ಬಾಯಾರಿಕೆ' ಎಂದು ಸುಳ್ಳು ಹೇಳಿ ಹೋಗಿ ಕುಡಿದು ಬರುತ್ತಾನೆ. ದಾರಿಯುದ್ದಕ್ಕೂ ನನ್ನ ಕಾಲ ಹಿಡಿದು ಮೇಲಕ್ಕೆತ್ತುತ್ತದೆ. ಎಂದು ಬೀಳುತ್ತ ಏಳುತ್ತ ಬರುತ್ತಿದ್ದನ್ನು ಕಂಡು ಶ್ಯಾಮಯ್ಯ ಗೌಡ್ರು ಇವನಿಂದ ಉಳಿಗಾಲವಿಲ್ಲ ಎಲ್ಲಿ ಹೋದ್ರೂ ಕೊಂಬು ಹುಯ್ಲೆ ಎಂದು ಬಯ್ಯುತ್ತಾರೆ.

ಮುತ್ತಳ್ಳಿಯಲ್ಲಿದ್ದ ಸೀತೆ ಸಹಜ ಸ್ಥಿತಿಗೆ ಬರುತ್ತಾಳೆ. ಲಕ್ಷ್ಮೀ ಪುಟ್ಟಮ್ಮ ಮತ್ತು ಗೌರಮ್ಮನವರಿಗೆ ಕಥೆ ಓದಿ ಹೇಳುತ್ತಾಳೆ. ದೇವರ ಫೋಟೋ, ಹೂವಯ್ಯನಿತ್ತ ಮಹಾಪುರುಷರ ಫೋಟೋಗಳನ್ನು ಪೂಜಿಸುವ ಆಧಾತ್ಮಿಕತೆಗೆ ಒಲಿಯುತ್ತಾಳೆ. ಒಟ್ಟಾರೆ ಹೂವಯ್ಯನ ಆದರ್ಶ ತತ್ವಗಳನ್ನು ಸೀತೆ ಮೈಗೂಡಿಸಿಕೊಂಡಿದ್ದಳು.

ಹೂವಯ್ಯ ಎಷ್ಟೆಷ್ಟು ಪ್ರಭುದ್ಧ ಮಟ್ಟಕ್ಕೇರುತ್ತಾನೆಯೋ ಅಷ್ಟಷ್ಟು ರಾಮಯ್ಯ ಕೆಳಹಂತಕ್ಕೆ ಇಳಿದಿರುತ್ತಾನೆ. ಸಮಸ್ಯೆಯೊಳಗೆ ಸಿಕ್ಕಿಕೊಂಡು ಭೂತ ಪ್ರೇತಗಳನ್ನು ನಂಬಿ ಯಾವ ಸಮಸ್ಯೆಯನ್ನೂ ಪರಿಹರಿಸಿಕೊಳ್ಳದೆ ಸುಬ್ಬಮ್ಮನ ಅಂತಿಮ ಜೀವನದ ಬೀಭತ್ಸ ದೃಶ್ಯವನ್ನು ಕಂಡು ಆತ್ಮಹತ್ಯೆಗೆ ಶರಣಾಗುತ್ತಾನೆ.

**ಹತ್ತು ವರ್ಷಗಳಾದ ಮೇಲೆ:**

ಹತ್ತು ವರ್ಷಗಳಲ್ಲಿ ಕಾನೂರಿನ ಚಿತ್ರಣ ತುಂಬಾ ಬದಲಾಗುತ್ತದೆ. ಆಧುನಿಕತೆ ಕಾಲಿಟ್ಟಿದೆ. ನವಜೀವನ ಅವರೆಲ್ಲರ ಬಾಳಲ್ಲಿ ಪುಟಿದೇಳುತ್ತಿದೆ. ಹೂವಯ್ಯನ ಪ್ರಭಾವ

ಸುತ್ತಮುತ್ತಲ ಹಳ್ಳಿಗಳಲ್ಲೂ ಗಣನೀಯವಾಗಿತ್ತು. ತಪಸ್ವಿನಿಯಾದ ಸೀತೆಯ ಪ್ರಭಾವವೂ ಸದ್ದುಗದ್ದಲವಿಲ್ಲದೆ ಮೇಲೇರಿತ್ತು. ಆಕೆ ಖಾದಿ ಸೀರೆ ಉಟ್ಟು ಸ್ವಾತಂತ್ರ್ಯ ಚಳುವಳಿಯನ್ನು ಆಧ್ಯಾತ್ಮಿಕತೆಯನ್ನು ಸಾಂಕೇತಿಕವಾಗಿ ತಿಳಿಸುವವಳಂತೆಯೂ ಇದ್ದಳು.

ಕಾನೂರು ಮುತ್ತಳ್ಳಿಗಳಿಗೆ ಸಮೀಪವಾಗಿದ್ದ ಕಳ್ಳಂಗಡಿ ಕುಸಿದು ಬಿದ್ದಿತ್ತು. ಕಳ್ಳಂಗಡಿ ಕುಸಿದು ಬೀಳುವುದರೊಂದಿಗೆ ಅಲ್ಲಿದ್ದ ದುಷ್ಟ ಕೂಟಗಳಿಗೆ ಆವಾಸ ಸ್ಥಾನವಾಗಿದ್ದ ಎಲ್ಲವೂ ನಾಶಹೊಂದಿತ್ತು. ಕುಗ್ರಾಮಗಳಾಗಿದ್ದ ಕೆಲವು ಹಳ್ಳಿಗಳನ್ನೂ ಸೇರಿಸಿ ಆಸ್ಪತ್ರೆ, ಪೋಸ್ಟಾಫೀಸು, ಅಂಗಡಿಗಳೂ ತಲೆ ಎತ್ತಿದ್ದವು. ರಸ್ತೆಯಲ್ಲಿ ಮೋಟಾರು ಕಾರು, ಬಸ್ಸುಗಳ ಪ್ರವೇಶವಾಗಿದ್ದವು ಸ್ವಾತಂತ್ರ್ಯ ಪೂರ್ವದಲ್ಲಾದ ಕಾರಣ ಅಲ್ಲಲ್ಲಿ ಗಾಂಧಿವಾದಿಗಳ ಉಪನ್ಯಾಸ ಕೇಳಿಬರುತ್ತಿತ್ತು. ಅಕ್ಷರಸ್ತರು ಪತ್ರಿಕೆ ಓದುವ ಅಭ್ಯಾಸದಲ್ಲಿ ತೊಡಗಿದ್ದರು. ಪ್ರಾಪಂಚಿಕ ವಿಷಯಗಳ ಬಗ್ಗೆ ಚರ್ಚೆ ನಡೆಯುತ್ತಿತ್ತು. ಮಾರಿ ಪೂಜೆ, ದೆವ್ವದ ಪೂಜೆಗಳಿಗೆ ಬದಲಾಗಿ ಧಾರ್ಮಿಕ ವಿಧಿ ವಿಧಾನಗಳು ಕಾಲಿಟ್ಟಿದ್ದವು.

ಹೂವಯ್ಯನ ಕರುಣೆಯಿಂದ ಸೋಮ–ಸೇರೆಗಾರ ಸೋಮನಾಗಿ ಬೇಲರು ಘಟ್ಟದವರು ಈಗ ಮನೆಗಳನ್ನು ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ. ಈಗ ಕಾಯಿಲೆ ಬಂದರೆ ಜೋಯಿಸರ ಹತ್ತಿರ ಹೋಗುವ ಬದಲು ಆಸ್ಪತ್ರೆಗೆ ಹೋಗುತ್ತಿದ್ದಾರೆ. ನಿಂಗನ ಮಗ ಪುಟ್ಟ ಸೀತೆಯ ಸಹಾಯದಿಂದ ಅಕ್ಷರಸ್ಥನಾಗಿದ್ದಾನೆ. ಮದುವೆಯಾಗಿ ಕೆಳಕಾನೂರಿನಲ್ಲಿ ಒಕ್ಕಲಾಗಿದ್ದಾನೆ. ಈಗ ಆತ ಸಣ್ಣಪುಟ್ಟಣ್ಣ ಆಗಿದ್ದಾನೆ. ಕಾನೂರಿನ ಮನೆಯೂ ಕೂಡ ಈಗ ಹೊಸ ಮಾರ್ಪಾಟನ್ನು ಹೊಂದಿದೆ. ಆದರೆ ಹೂವಯ್ಯ ಅಲ್ಲಿ ವಾಸಿಸುತ್ತಿಲ್ಲ. ಮನೆಬಿಟ್ಟು ಆಶ್ರಮ ಸೇರಿರುತ್ತಾನೆ. ಅಂದರೆ ಆತ ಕರ್ಮಯೋಗಿಯಾಗಿ ತಪಸ್ವಿಯಾಗಿ ಬಿಟ್ಟಿದ್ದಾನೆ. ನಾನೂ ಅಕ್ಕನ ಹಾಗೆ ಇರ್ತೀನಿ ಅಂದ ಲಕ್ಷ್ಮಿ ವಾಸಪ್ಪ ಗೌಡರನ್ನು ಮದುವೆ ಆಗ್ತಾಳೆ.

ಅಕ್ಷರ ಬಲ್ಲವರು ಪತ್ರಿಕೆಗಳನ್ನು ಓದುವ ಅಭ್ಯಾಸ ಮಾಡಿ ವಿಶಾಲ ಪ್ರಪಂಚದ ವಿಚಾರಗಳನ್ನು ಕುರಿತು ಮಾತನಾಡುತ್ತಿದ್ದರು. ದೆವ್ವದ ಪೂಜೆ ಮೊದಲಾದ ಮೂಢಾಚಾರಗಳಿಗೆ ಬದಲಾಗಿ ಉತ್ಕೃಷ್ಟವಾದ ಮತ ವಿಧಾನಗಳು ಆಚರಣೆಗೆ ಬಂದವು. ಇಲ್ಲಿನ ಜನ ಪ್ರಸಕ್ತ ಸಮಾಜಕ್ಕೆ ಹೇಗೆ ಸ್ಪಂದಿಸುತ್ತಿದ್ದರು ಎಂಬುದು ತಿಳಿಯುತ್ತದೆ.

ವಾಸು ಕೊನೆಯ ದೃಶ್ಯದಲ್ಲಿ ಧರಿಸಿದ ವಸ್ತ್ರಗಳು, ಖಾದಿಯ ಬಿಳಿ ಪಾಯಿಜಾಮೆಯನ್ನು ಖಾದಿಯ ಪಂಜಾಬಿ ವೇಷಭೂಷಣವನ್ನು ಧರಿಸಿದ್ದನು. ಅಷ್ಟೇ ಅಲ್ಲ ಬಯಲು ಸೀಮೆಯ ತೆಳ್ಳನೆ ಮೆಟ್ಟುಗಳು ಕಾಲಿನಲ್ಲಿ ಶೋಭಿಸುತ್ತಿದ್ದವು. ಮಲೆನಾಡಿಗೆ ಒರಟು ಬಟ್ಟೆಗಳನ್ನು ಹಾಕಿಯೇ ಅಭ್ಯಾಸವಾದ ಜನ ಇದ್ದ ಕಾಲ ಬದಲಾಗಿದೆ. ವಾಸು ಧರಿಸುವ ಬಿಳಿವಸ್ತ್ರ ಅದರಲ್ಲೂ ಪಂಜಾಬಿ ವೇಷ ಧರಿಸಿದ್ದು ಆ ನಾಡಿಗೆ ವಿಶೇಷವಾಗಿತ್ತು.

ಕಾನೂರು ಮನೆಯಿಂದ ಕಾನುಬೈಲು ಶಿಖರಕ್ಕೆ ಹೂವಯ್ಯನ ಮನೆಯವರೆಲ್ಲಾ ಹೊರಟಿದ್ದರು. ಅದರಲ್ಲಿ ವಾಸು, ಲಕ್ಷ್ಮೀ, ಪುಟ್ಟಮ್ಮ, ರಮೇಶ ಜೊತೆಗೆ ಸೀತೆಯೂ ಇದ್ದಳು. ಬೆಟ್ಟ ಏರುವಾಗ ವಾಸಯ್ಯ 'ಬೇಗ ಬೇಗ ಬನ್ನಿ' ಎಂದು ಕರೆಯುತ್ತಾನೆ. ಅದಕ್ಕೆ ಪುಟ್ಟಮ್ಮ "ಲಕ್ಷ್ಮೀ, ಮಾಧೂನ ಸ್ವಲ್ಪ ಕರಕೊಳ್ತೀಯಾ? ನನಗೆ ದಣಿವಾಗಿದೆ" ಎನ್ನುತ್ತಾಳೆ. ಹೊಸ ಸೀರೆ, ಅಲಂಕಾರಗಳಿಂದ ಶೋಭಿಸುತ್ತಿದ್ದ ನವನವೀನ ಹೆಣ್ಣು ಲಕ್ಷ್ಮೀ ತನ್ನ ಶೃಂಗಾರವೆಲ್ಲಿ ಹಾಳಾಗುತ್ತದೊ ಎಂದು 'ನನಗೂ ಸುಸ್ತಾಗಿದೆ' ಎನ್ನುತ್ತಾಳೆ. ನಿಜವಾಗಿಯೂ ಲಕ್ಷ್ಮೀಗೆ ಸುಸ್ತಾಗಿರಲಿಲ್ಲ. ಇಲ್ಲಿ ಲಕ್ಷ್ಮೀಗೆ ಹೆಚ್ಚಿನ ಸೌಂದರ್ಯ ಪ್ರಜ್ಞೆ ನಿಮಿತ್ತವಾಗಿ ಮಗುವನ್ನು ಎತ್ತಿಕೊಳ್ಳುವುದಿಲ್ಲ.

ಹೂವಯ್ಯ ಸೀತೆಯರ ಸಂಬಂಧ ರಾಮಕೃಷ್ಣ ಪರಮಹಂಸ ಮತ್ತು ಶಾರದಾಂಬೆಯರ ಸಂಬಂಧದಂತೆ ಆಧ್ಯಾತ್ಮಿಕವಾಗಿಯೇ ಉಳಿಯುತ್ತದೆ. ಲಕ್ಷ್ಮೀ ಹಾರ್ಮೋನಿಯಂ ನುಡಿಸುವುದು, ಭಾವೈಕ್ಯ ಗೀತೆ ಹಾಡುವುದು, ನವಜೀವನಕ್ಕೆ ತಮ್ಮನ್ನು ತೆಗೆದುಕೊಂಡಂತೆ ಕಾಣುತ್ತಿತ್ತು. ಇವರೆಲ್ಲ ನವೀನ ಆಶಾ ಜಗತ್ತಿಗೆ ತೇಲಿ ಹೋಗುತ್ತಿದ್ದಾರೆ.

## ಮಲೆಗಳಲ್ಲಿ ಮದುಮಗಳು

ಕಾದಂಬರಿಯ ಹಂದರವನ್ನು ನೋಡುವುದಾದರೆ ಇದೊಂದು ಮೂವರು ನಾಯಕರಿರುವ ಕಥೆ. ಇವರ ಮೂಲಕ ಮಲೆನಾಡಿನ ಜೀವನ ಚಿತ್ರಣ, ಇಲ್ಲಿನ ಸಂಸ್ಕೃತಿ, ಭಾಷೆ, ವೇಷಭೂಷಣಗಳನ್ನು ಹಾಗೂ ಮುಖ್ಯವಾಗಿ ಇವೆಲ್ಲವುಗಳಲ್ಲೂ ಕಂಡು ಬರುವ ಆಧುನಿಕತೆಯನ್ನು ಗುರುತಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಾಯದಲ್ಲಿ ಮಾಡಲಾಗಿದೆ.

ಗುತ್ತಿ ಕೆಳವರ್ಗದವನಾಗಿದ್ದ. ಮರಾಟಿ ಮಂಜನಂತೆ ಆರಡಿ ಇರದೆ ತುಂಬಾ ಕುಳ್ಳಗಿದ್ದನು. ಕುಳ್ಳಗಿದ್ದರೂ ಕಟ್ಟುಮಸ್ತಾದ ಆಳು. ಆತ ಸೊಂಟಕ್ಕೆ ಸುತ್ತಿದ್ದ ಪಂಚೆಯತುದಿ ಮೊಳಕಾಲನ್ನು ಮುಟ್ಟಿತ್ತು. ಮೊಳಕಾಲಿನವರೆಗೂ ಪಂಚೆ ಉಡುವುದು ಆಧುನಿಕತೆ ಸಂಕೇತ, ಕಿವಿಗೆ ಒಂಟಿ. ಕ್ಷೌರ ಮಾಡಿಸಿದ ಮುಖ. ನೋಡಲು ಬೆಳ್ಳಗೆ ಮಲೆಯರಂತೆ ಇದ್ದನು. ಹೆಗಲ ಮೇಲಿದ್ದ ಕಂಬಳಿಕೊಪ್ಪೆ ಮಳೆಗೆ ಸಿದ್ಧನಾಗಿ ಬಂದದ್ದನ್ನು ಸೂಚಿಸುತ್ತಿತ್ತು. ಬಗಲಲ್ಲಿದ್ದ ಬಗನಿಮರದ ದೊಣ್ಣೆ ಹೊಡೆದಾಟಕ್ಕೆ ಸಿದ್ಧವಾಗಿದ್ದುದನ್ನು ಸೂಚಿಸುತ್ತಿತ್ತು.

### ನಂಬಿಕೆ :

ಹಳುವಿನಲ್ಲಿ ಪ್ರಾಣಿ ಹೋದ ಸದ್ದನ್ನು ಕೇಳಿ 'ಇದರ ಮನೆ ಹಾಳಾಗ್ಲೋ, ಈ ನರಿಯಿಂದ ಸುಖ ಇಲ್ಲ' ಎಂದು ಗುತ್ತಿ ಹೇಳುತ್ತಾನೆ. 'ಹುಲಿ' ಎಂಬುದಕ್ಕೆ ಬದಲಾಗಿ ನರಿ ಎನ್ನುತ್ತಾನೆ. ಹುಲಿಯನ್ನು ನರಿ ಎಂದು ಕರೆದರೆ ಈ ಮನುಷ್ಯ ತನ್ನನ್ನು ನರಿಯಂತೆ ಕೀಳಾಗಿ ಕಾಣುತ್ತಾನೆಂದು ಭಾವಿಸಿ ನಾಚಿಕೆ ಪಟ್ಟು ಓಡಿ ಹೋಗುತ್ತದೆ. ಎಂಬುದು ಇವನ ಅಭಿಮತ. ಗ್ರಾಮೀಣರು ಕೆಲವು ಪದಗಳನ್ನು ನೇರವಾಗಿ ಹೇಳದೆ ಪರೋಕ್ಷವಾಗಿ ಹೇಳುತ್ತಾರೆ. ಉದಾ: ಹಾವು ಕಚ್ಚಿದರೆ 'ಹುಳು ಮುಟ್ಟಿತು', 'ಬಳ್ಳಿ ಮುಟ್ಟಿತು' ಎನ್ನುವಂತೆ.

ಗುತ್ತಿಯೊಂದಿಗೆ ಸದಾ ಇರುತ್ತಿದ್ದ ನಾಯಿ 'ಹುಲಿಯು'. ಈ ನಾಯಿ ಜೊತೆಯಲ್ಲಿರುತ್ತಿದ್ದುವುದರಿಂದಲೇ ಇವನಿಗೆ 'ನಾಯಿಗುತ್ತಿ' ಎಂಬ ಹೆಸರು ಬಂತು. ಈ ನಾಯಿ ಇರುವುದು ಧರ್ಮದ ಸಂಕೇತವಾಗಿ. ಧರ್ಮರಾಯ ಸ್ವರ್ಗಕ್ಕೆ ಹೋಗುವಾಗ ನಾಯಿ ಅವನ ಜೊತೆಯೇ ಹೋದಂತೆ ಗುತ್ತಿ ನಂಬಿದ ಧರ್ಮವನ್ನು ಅನುಸರಿಸಿಕೊಂಡೇ ಆತನ ನಾಯಿಯೂ ಬರುತ್ತದೆ. ನಾಯಿ ಕಪ್ಪಾಗಿದ್ದದ್ದಕ್ಕೆ ಕೆಲವರು 'ಕರಿಯಾ' ಎಂದರೂ ಒಪ್ಪದೆ 'ಹುಲಿಯಾ' ಎಂದು ಹೆಸರಿಟ್ಟಿದ್ದು ಗುತ್ತಿಯಂಥ ಕೆಳವರ್ಗದವರಿಗೂ ಅಭಿವ್ಯಕ್ತಿ ಸ್ವಾತಂತ್ರ್ಯ ಒದಗಿತ್ತು ಎಂಬುದಕ್ಕೆ ನಿದರ್ಶನವಾಗಿದೆ. ಮಾತ್ರವಲ್ಲದೆ ಅನ್ವರ್ಥನಾಮಗಳ ಕಡೆಗೆ ಸೆಳೆತ ಇತ್ತು ಎಂಬುದನ್ನೂ ಪರೋಕ್ಷರೂಪದಲ್ಲಿ ಇದು ತಿಳಿಸುತ್ತದೆ.

## ಪುರೋಹಿತ ವರ್ಗ

ತೀರ್ಥಹಳ್ಳಿಯಿಂದ ಆಗುಂಬೆಗೆ ಹೋಗುವ ಮಾರ್ಗ ಮಧ್ಯದಲ್ಲಿ ಮೇಗರವಳ್ಳಿ ಸಿಗುತ್ತದೆ. ಗುತ್ತಿಯ ಪಾಲಿಗೆ ಅದೇ ದೊಡ್ಡ ಪೇಟೆ. ಹೆಚ್ಚೆಂದರೆ ನಾಲ್ಕಾರು ಹುಲ್ಲಿನ ಮನೆ. ಆಸ್ಪತ್ರೆ, ಸ್ಕೂಲ್, ಷಾಪು, ಹೋಟೆಲು, ಮಿಲ್ಲು ಯಾವುದೂ ಇರಲಿಲ್ಲ. ಆದರೆ ಕಣ್ಣಾ ಪಂಡಿತರಿದ್ದರು. ಕಣ್ಣಾಪಂಡಿತರು ಇಡೀ ಸುತ್ತಲ ಹಳ್ಳಿಗೆ ನಾಟಿ ವೈದ್ಯರು. ಅಂತ್ರ ತಂತ್ರ ಬರೆಯುವವರು. ಕಾನೂರು ಹೆಗ್ಗಡಿತಿಯಲ್ಲಿ ವೆಂಕಟಪ್ಪ ಜೋಯಿಸರಿದ್ದಂತೆ ಇಲ್ಲಿ ಕಣ್ಣಾ ಪಂಡಿತರಿದ್ದರು.

ಈ ಊರಿನ ಇನ್ನೊಂದು ವಿಶೇಷ ಮಾಪಿಳ್ಳೆಯವರಾದ ಕರಿಮೀನುಸಾಬರು. ಇಲ್ಲಿ ಅಂಗಡಿ ಇಟ್ಟಿದ್ದರು. ಒಂದು ಕಳ್ಳಿನ ಅಂಗಡಿಯೂ ಇತ್ತು. ಮಲೆನಾಡಿನಲ್ಲಿ ಏನಿರದಿದ್ದರೂ ಕಳ್ಳಿನ ಅಂಗಡಿ ಇರಲೇ ಬೇಕು. ಇದೊಂದು ರೀತಿ ಕ್ಲಬ್ಬೂ ಆಗಿತ್ತು. ಸೆಟ್ಟಿಗಿತ್ತಿ ಅಂತಕ್ಕನ ಮನೆ ತಕ್ಕಮಟ್ಟಿಗೆ ಹೋಟೆಲೂ ಆಗಿತ್ತು. ಇದು ವ್ಯಾಪಾರಿಗಳು ಕೂಲಿಯಾಳುಗಳು ಗಂಧದಮರ ಸಾಗಿಸುತ್ತಿದ್ದ ಗುಪ್ತ ದಲ್ಲಾಳಿಗಳೂ ಬರುತ್ತಿದ್ದ ಜಂಕ್ಷನ್ ಆಗಿತ್ತು.

ಪುರೋಹಿತ ವರ್ಗದವರು ಎಂದಿಗೂ ಬುದ್ಧಿವಂತರೆ. ಕಣ್ಣಾಪಂಡಿತರು ಗುತ್ತಿಯಲ್ಲಿ ಹಣವಿಲ್ಲವೆಂದರಿತು ಹಣಕೊಳ್ಳದೆ, ಒಂದು ಕೋಳಿಯನ್ನು ತಂದು ಕೊಡು ಎಂದು ಹೇಳುತ್ತಾ ಕಾರ್ಯಸಾಧನೆ ಮಾಡಿಕೊಳ್ಳುತ್ತಾರೆ. ಅವರವರ ಯೋಗ್ಯತೆಗನುಗುಣವಾಗಿ ಅವರಿಂದ ನಿರೀಕ್ಷಿಸುವುದು ಬುದ್ಧಿವಂತರ ಲಕ್ಷಣ.

ಮಗ ಬಿಳಿಬಟ್ಟೆ ಹಾಕಿದರೂ ತಿಮ್ಮಪ್ಪಹೆಗ್ಗಡೆ ಸಹಿಸುತ್ತಿರಲಿಲ್ಲ. ಮನೆಯ ಹೆಂಗಸರು ಮೊಳಕಾಲು ಕೆಳಗೆ ಸೀರೆ ಉಟ್ಟರೂ ಬ್ರಾಹ್ಮಣರಂತೆ ಸೀರೆ ಉಡುತ್ತಾರೆಂಬ ಕೊಂಕು. ಒಟ್ಟಾರೆ ನಾಗರಿಕತೆಯಿಂದ ತುಂಬಾ ಹಿಂದುಳಿದ ಮನೆಯಾಗಿತ್ತು. ಸುಬ್ಬಣ್ಣ ಹೆಗ್ಗಡೆಯವರು ಯೌವ್ವನದಲ್ಲಿ ದರ್ಪದಿಂದ ಬಾಳಿದವರು. ಆದರೆ ಕಾಲ ಬದಲಾಗಿದೆ. ಮಕ್ಕಳು ತಿರುಗಿ ಮಾತನಾಡುವುದು ಅವರಿಗೆ ಇಡೀ ಸಮಾಜವೆ ತಿರುಗಿ ಮಾತನಾಡಿದಂತೆ ತೋರುತ್ತದೆ. ಅವರ ಪಾಲಿಗಂತೂ ಕಾಲ ಬಹಳ ಬದಲಾಗಿದೆ.

'ಸಾಲಮಾಡಿಯಾದ್ರು ತುಪ್ಪ ತಿನ್ನು' ಎಂಬಂತೆ ಶಂಕರಣ್ಣ ತನ್ನ ಅನುಕೂಲತೆಗೆ ತಕ್ಕಂತೆ ಹೊಂದಿಕೊಳ್ಳುತ್ತಾನೆ. ಶಂಕರಣ್ಣ ಹೆಂಚು ಹಾಕಿಸಿದ್ದು ಆಧುನಿಕತೆಗೆ ಸಾಕ್ಷಿಯಾಗಿದೆ. ಪೇಟೆಗೆ ಹೋಟೆಲ್ ಬಂದ ಪರಿಣಾಮವಾಗಿ ಹೊಲೆಯ ಗುತ್ತಿಯನ್ನು ದೋಸೆ ವಾಸನೆ ಆಕರ್ಷಿಸುತ್ತದೆ.

**ವಿದ್ಯಾಭ್ಯಾಸ :**

ಮಲೆನಾಡಿನ ಆ ಪ್ರದೇಶದಲ್ಲಿ ಹಳ್ಳಿಗೆ ಒಂದೆರಡು ಮೈಲಿಗಳೊಳಗೆ ಇರುವ ಕೋಣೂರಿನ ಮನೆಯಲ್ಲೆ ಒಂದು ಐಗಳ ಮಠವಿದ್ದು, ಹಳೆಮನೆ, ಬೆಟ್ಟಳ್ಳಿ ಸಮೀಪದ ಊರು ಮನೆಯ ಕೆಲವೆ ಮಕ್ಕಳು 'ಬರಾವು' ಕಲಿಯುತ್ತಿದ್ದರಾದರೂ ಗಂಡು ಮಕ್ಕಳಿಗೇ ವಿದ್ಯೆ ಗಗನಕುಸುಮವಾಗಿತ್ತು. 'ಹೆಣ್ಣು ಮಕ್ಕಳು ಓದು ಕಲಿಯುವುದು ಗಂಡಸರು ಸೀರೆಯುಡುವುದಕ್ಕಿಂತಲೂ ಹಾಸ್ಯಾಸ್ಪದವಾಗಿತ್ತು, ಮುಕುಂದಯ್ಯ ಚಿನ್ನೀನ ನಮ್ ಮನೆಗೆ ಬರೆಯಾಕೆ ಕಳಿಸಿ ಎಂದದ್ದಕ್ಕೆ ವೆಂಕಣ್ಣ ನಕ್ಕು, 'ಹೌದು ಕಣೋ' ಅವಳಿನ್ನು ಬರಾವು ಕಲಿತು ಮಣೆಗಾರಿಕೆ ಮಾಡುವುದೊಂದೇ ಬಾಕಿ' ಎಂದನಂತೆ. ಅಷ್ಟು ಹಿಂದುಳಿದ ಊರು. ಅಲ್ಲಿ ಮಣೆಗಾರಿಕೆ ಎಂಬುದು ಹಸ್ತ ಪ್ರತಿಗಳನ್ನು ಲಿಖಿತ ಮಾಡುವ ಸಂದರ್ಭದಲ್ಲಿ ಬರುತ್ತದೆ. ಚಂದ್ರಯ್ಯಗೌಡರೂ ಪುಟ್ಟಮ್ಮನನ್ನು 'ನೀನು ವಿದ್ಯೆಕಲ್ತು ದೊರೆಸಾನಿ ಆಗಿಯೇನೆ' ಎಂದು ಬಯ್ಯುವುದು ಸ್ತ್ರೀ ಶಿಕ್ಷಣದ ಅಪ್ರಾಮುಖ್ಯಕತೆ ತಿಳಿಸುತ್ತದೆ. ಕೊನೆಯಪಕ್ಷ ಸ್ತ್ರೀ ಶಿಕ್ಷಣ ಬೇಕೇ ಬೇಡವೇ ಎಂಬ ಚರ್ಚೆಯಾದರೂ ಆಕಾಲಕ್ಕೆ ಮಲೆನಾಡಿನಲ್ಲಿ ಪ್ರಾರಂಭವಾಗಿತ್ತು.

"ಅಯ್ಯಯ್ಯೋ ಹೊಲೆಮಾದಿಗರ ಸಹವಾಸ. ತುಳಸೀಕಟ್ಟೆ ಮೇಲೆ ನುಗ್ಗಿಸ್ತಾರಲ್ಲ ಹೇಲ್ ತಿನ್ನ ಹಂದೀನ ಎಂದು ಶಂಕರಪ್ಪ ಕೂಗುವುದು ನೋಡಿದರೆ ನಿತ್ಯಜೀವನದಲ್ಲಿ ಇಂಥ ಪದಬಳಕೆ ಮಾಡಲು ಅವರಿಗೆ ಬೇಸರವೇ ಆಗುವುದಿಲ್ಲ. ಎಂಬುದು ತಿಳಿದು ಬರುತ್ತದೆ. ವಿದ್ಯಾಭ್ಯಾಸದ ಕೊರತೆಯಿಂದಲೂ ಇಂತಹ ಮಾತುಗಳು ಹುಟ್ಟಿಕೊಳ್ಳುವುದಕ್ಕೆ ಸಾಧ್ಯ.

**ಪುರೋಗಾಮಿ ವಂಶ :**

'ಬೆಟ್ಟಳ್ಳಿ ಹಕ್ಕಲಲ್ಲಿ ಸಂಜೆವೇಳೆ ತೀರ್ಥಹಳ್ಳಿ ಕಿಲಸ್ತರ ಪಾದ್ರಿ ಬೀಸೆಕಲ್ಲು ಸವಾರಿ ಮಾಡ್ತಾನಂತೆ. ಬೆಟ್ಟಳ್ಳಿ ಸಣ್ಣ ಗೌಡ್ರಿಗೂ ಕಲಿಸ್ತಾನಂತೆ. ಇಲ್ಲಿ ಬೈಸಿಕಲ್ ಗ್ರಾಮದ ಭಾಷೆಯಲ್ಲಿ ಬೀಸೆಕಲ್ಲಾಗಿದೆ. ಎತ್ತಿನ ಗಾಡಿಯಲ್ಲಿ ಸವಾರಿ ಮಾಡುವ ಕಾಲಘಟ್ಟದಿಂದ ಯಂತ್ರಯುಗ ಪ್ರವೇಶ ಮಾಡುವ ಹಂತ ಮಲೆನಾಡಿನ ಚರಿತ್ರೆಯಲ್ಲಿ ಮುಖ್ಯವಾದ ಭಾಗ. ಸೈಕಲ್ ಹಾಗೂ ಪಾದ್ರಿಗಳು ಆಧುನಿಕ ಕಾಲಘಟ್ಟದ ಪ್ರತೀಕವಾಗಿಯೂ ತೋರುತ್ತಾರೆ. ಅನಂತಯ್ಯನವರು ಜುಟ್ಟು ಬಿಟ್ಟು ಬ್ರಾಹ್ಮಣ ಹುಡುಗರಿಗೆ ಕೂಲಿ ಮಠದಲ್ಲಿ ಅಕ್ಷರಾಭ್ಯಾಸ ಮಾಡಿಸುತ್ತಾರೆ. ಆಳುಲೆಕ್ಕ ಇಡುವುದು. ಗದುಗಿನ ಭಾರತ, ತೊರವೆ ರಾಮಾಯಣ

ಜೈಮಿನಿಭಾರತ ಇತ್ಯಾದಿಗಳನ್ನು ಓಲೆಗರಿಯಲ್ಲಿ ನಕಲು ಮಾಡುವುದು ಅಂದಿನ ಕಾಲಕ್ಕೆ ಅದೇ ಹೆಚ್ಚಿನ ಆಧುನಿಕತೆಯಾಗಿತ್ತು.

ಇಡೀ ಕಾದಂಬರಿ ಒಂದು ರೀತಿ ಕಾಮಕೇಂದ್ರಿತವಾದದ್ದು. ಐತ ಪೀಂಚಲುವನ್ನು ಅಷ್ಟು ಪ್ರೀತಿಸಿದರೂ ನಂಬಿಕೆ ಇಲ್ಲದಂತೆ ನಡೆದುಕೊಳ್ಳುತ್ತಾನೆ. ಪ್ರೀತಿಸಿದ ವಸ್ತು ಸಂಪೂರ್ಣ ತನ್ನದಾಗಬೇಕೆಂಬ ಹಂಬಲ ಇರುತ್ತದೆ. "ಗಂಡನ ಧರ್ಮದ ಪ್ರಕಾರ ಪೀಂಚಲು ತನ್ನನ್ನು ಮುಕುಂದಯ್ಯನಿಗೆ ಸಂಪೂರ್ಣವಾಗಿ ಅರ್ಪಿಸಿಕೊಂಡದ್ದರಲ್ಲಿ ತಪ್ಪಿಲ್ಲ. ಒಂದು ವೇಳೆ ಅರ್ಪಿಸಿಕೊಂಡು ತನ್ನ ಗಂಡನಿಗೆ ವಂಚನೆ ಮಾಡುತ್ತಿದ್ದೇನೆಯೆ ಎಂಬ ಭಾವನೆ ಅವಳಲ್ಲಿ ಇದ್ದಿದ್ದರೆ ಅದು ತನ್ನ ಗಂಡನಿಗೆ ಮೋಸಮಾಡಿದಂತಾಗುತ್ತಿತ್ತು. ಜಾರೆಯಾಗುತ್ತಿದ್ದಳು. ಕುಟಿಲೆಯಾಗುತ್ತಿದ್ದಳು." (ಮ.ಮ. ಪು.೮೭೮– ೮೨೬). ಆದರೆ ಮುಕುಂದಯ್ಯನಿಗೆ ಅಂಥ ಕೆಟ್ಟ ಉದ್ದೇಶ ಏರಲಿಲ್ಲ. ಪೀಂಚಲು ಬಹುಶ ಮುಕುಂದಯ್ಯನ ಮುಂದೆ ಹೀಗೆ ನಡೆದುಕೊಳ್ಳುತ್ತಾನೆ ಎಂದು ಐತ ಊಹಿಸಿದರೂ ಆ ಕ್ರಿಯೆ ನಡೆಯಲಿಲ್ಲ. ಆಕೆಗೆ ಕೇವಲ ಮೇಲ್ವರ್ಗದವರನ್ನು ಮುಟ್ಟು ಮೈಲಿಗೆ ಮಾಡಿದೆನೆಂಬ ಭಾವನೆ ಇತ್ತು. ಜೊತೆಗೆ ಮುಕುಂದಯ್ಯನ ಮೇಲೆ ದೈವ ಭಾವನೆಯೂ ಇತ್ತು. ಜಾತಿ ನಾಯಿಯನ್ನು ಮೆಚ್ಚಿ ಕೊಳ್ಳುವಂತೆ ಪೀಂಚಲುವನ್ನು ಆತ ಮೆಚ್ಚಿಕೊಂಡಿದ್ದ.

**ದೇವಯ್ಯನಲ್ಲಾದ ಬದಲಾವಣೆ :**

ದೇವಯ್ಯ ಕ್ರೈಸ್ತ ಮಿಷಿನರಿಗಳ ಸಂಪರ್ಕಕ್ಕೆ ಬರುತ್ತಿದ್ದ ಹಾಗೆ ಅವನಲ್ಲಿ ಹಂತಹಂತವಾಗಿ ಬದಲಾವಣೆಗಳು ಕಾಣಿಸತೊಡಗಿತು. ಆತ ತೀರ್ಥಹಳ್ಳಿಗೆ ಹೋದಾಗಲೆಲ್ಲಾ ಒಂದಲ್ಲ ಒಂದು ರೀತಿಯಲ್ಲಿ ಬದಲಾವಣೆಯಾಗಿಯೇ ಬರುತ್ತಿದ್ದನು. ಮನೆಗೆ ಹೊಸಹೊಸ ಸಾಮಗ್ರಿ ತರುತ್ತಿದ್ದನು. ಒಮ್ಮೆ ಗಡಿಯಾರ ತಂದಾಗ ಆ ನವನಾಗರಿಕ ವಸ್ತುವಿಗೆ ಎಲ್ಲರೂ ಅಚ್ಚರಿಪಟ್ಟರು. ಅದು ತನಕ ಅಂಗಳದ ನೆರಳನ್ನು ನೋಡಿ ವೇಳೆ ಗುರುತ್ತಿಸುತ್ತಿದ್ದವರು ಮಧ್ಯಾಹ್ನ ಕೆಲಸಕ್ಕೆ ಆಳುಗಳನ್ನು ಕರೆಯುವ ಸಂದಿಗ್ಧತೆ ತಪ್ಪಿತೆನ್ನುತ್ತಾರೆ. ಆತ ಜುಟ್ಟು ಬೋಳಿಸಿದ್ದನು. ದಿನನಿತ್ಯ ಸ್ನಾನಮಾಡಿ ಊಟಕ್ಕೆ ಹೋಗುವ ಮೊದಲು ಹಣೆಗೆ ನಾಮ ಇಟ್ಟುಕೊಳ್ಳುವುದನ್ನು ಬಿಟ್ಟಿದ್ದನು. ತುಳಸಿಕಟ್ಟೆಗೆ ಸುತ್ತು ಬರುವ ಧಾರ್ಮಿಕ ಆಚರಣೆ ಕೈ ಬಿಟ್ಟಿದ್ದನು. ದೆವ್ವದೇವರು ಸತ್ಯನಾರಾಯಣ ವ್ರತಗಳಲ್ಲಿ ಭಾಗವಹಿಸುವುದನ್ನು ಬಿಟ್ಟುಬಿಟ್ಟಿದ್ದನು. ನೇರವಾಗಿ ಸಿಂದುವಳ್ಳಿ ಚಿನ್ನಪ್ಪನನ್ನೆ ಅನುಸರಿಸುತ್ತಿದ್ದನು. ಸಿಂಧುವಳ್ಳಿ ಚಿನ್ನಪ್ಪಗೌಡ ಕ್ರೈಸ್ತ ಮತಾಂತರಕ್ಕಾಗಿ ಸಿದ್ಧಗೊಂಡ ವ್ಯಕ್ತಿ. ಇವನನ್ನು ಕಂಡರೆ ದೇವಯ್ಯನ ಹೆಂಡತಿ ದೇವಮ್ಮನಿಗೆ

ಉದಾಸೀನ. ತನ್ನ ಮಗುವನ್ನು ಅವನ ಹೆಸರಿನಿಂದ ಆರಂಭವಾಗುವ ಅಕ್ಷರದಿಂದ ಉಚ್ಚರಿಸಲೂ ಆಕೆ ಇಷ್ಟಪಡುತ್ತಿರಲಿಲ್ಲ. ಮಗುವಿಗೆ ಜೋಯಿಸರು 'ಚ' ಕಾರದಿಂದ ಪ್ರಾರಂಭವಾಗುವ ಹೆಸರನ್ನು ಇರಿಸುವರು ತಿಳಿಸಿದ್ದರು. ಚಿನ್ನಪ್ಪ ಎಂಬ ಹೆಸರು ಹೊಂದುತ್ತಿತ್ತು. ಆದರೆ ಅದು ದೇವಮ್ಮನಿಗೆ ಇಷ್ಟವಾಗಲಿಲ್ಲ. 'ಚಿ' ಬಿಟ್ಟು 'ಚ' ಕ್ಕೆ ಆಕೆ ಹೊರಟುಹೋಗಿ 'ಚಲುವಯ್ಯ' ಎಂಬ ಹೆಸರಿಟ್ಟು ಸಮಾಧಾನ ಪಟ್ಟುಕೊಂಡಳು. ಪುರೋಹಿತ ಶಾಹಿವರ್ಗದವರ ಹೆಸರನ್ನು ಕೆಳವರ್ಗದವರಿಗೆ ಇರಿಸುವುದನ್ನು ಅವರು ಇಷ್ಟಪಡುತ್ತಿರಲಿಲ್ಲ. ಕಾನೂರು ಹೆಗ್ಗಡತಿಯಲ್ಲಿ ಚಿನ್ನಯ್ಯನ ಮಗನಿಗೆ 'ಕರಿಯ' ಎಂದು ವೆಂಕಟಪ್ಪ ಜೋಯಿಸರಿಟ್ಟ ಹೆಸರನ್ನು ಬದಲಿಸಿ 'ರಮೇಶ' ಎಂದು ಕರೆಯುತ್ತಾರೆ. ಶೂದ್ರರಿಗೆ ಹೆಸರಿಡುವ ಸ್ವಾತಂತ್ರ್ಯವಿಲ್ಲ, ಅಷ್ಟೇ ಅಲ್ಲ; ಸೀತೆ ವೆಂಕಟಪ್ಪನವರ ಕಾದಂಬರಿಯಲ್ಲಿ ಹುಡುಕಾಡಿ ರಮೇಶ ಎಂಬ ಹೆಸರಿಡುವ ಆಧುನಿಕತೆಗೆ ಸೀತೆ ಕಾಲಿಡುತ್ತಾಳೆ.

ದೇವಮ್ಮನ ಮಗು ಕತ್ತಲೆ ಕೋಣೆಯಲ್ಲಿ ಬೆಳೆಯುತ್ತಿತ್ತು. ಹೊರ ಪ್ರಪಂಚ ಜ್ಞಾನ ರೂಢಿಸಿಕೊಳ್ಳುತ್ತಿದ್ದ ದೇವಯ್ಯನಿಗೆ ತನ್ನ ತೊಟ್ಟಿಲಮಗು ಕತ್ತಲೆಯಲ್ಲಿ ಬೆಳೆಯುತ್ತಿದ್ದುದು ಅನಾಗರಿಕ ವೆನ್ನಿಸಿತು. ಕಿಂಡಿಯ ಬಾಗಿಲು ತೆರೆಯುತ್ತಾನೆ. ಶೀತಗಾಳಿ ಒಳಸುಳಿಯುವುದನ್ನು ಕಂಡು ಮತ್ತೆ ಮುಚ್ಚುತ್ತಾನೆ. ಇದು ಆತನ ಮನಸ್ಸಿನ ಗೊಂದಲವನ್ನು ತಿಳಿಸುತ್ತದೆ. ತೀರ್ಥಹಳ್ಳಿಯಲ್ಲಿ ನಡೆದ ಕ್ರೈಸ್ತ ಉಪನ್ಯಾಸವನ್ನು ದೇವಯ್ಯ ಕೇಳಿ ಆತನಿಗೆ ತನ್ನ ಜನಾಂಗದ ಬಗ್ಗೆ ಜುಗುಪ್ಸೆ ಹುಟ್ಟುತ್ತದೆ. ಮನೆಗೆ ಬಂದು ದೇವರು ದೈವಗಳ ಹೆಸರಲ್ಲಿ ಕಟ್ಟಿದ ಅಂತ್ರ, ತೆಂಗಿನಕಾಯಿಗಳನ್ನು ಬಿಸಾಡುತ್ತಾನೆ. ಕೊರಳಲ್ಲಿದ್ದ ತಾಯಿತ ಸರಗಳನ್ನು ಮಗುವಿನ ಮಲ ಮೂತ್ರದಿಂದ ಕೂಡಿ ವಾಸನೆ ಬರುತ್ತಿತ್ತು. ಅದನ್ನು ಕಿತ್ತು ಎಸೆದು ನೈರ್ಮಲ್ಯಕ್ಕೆ ಮನ್ನಣೆ ನೀಡುತ್ತಾನೆ.

ಹೆಂಗಸರು ಮುಟ್ಟಾದಾಗ 'ಮರುವಿನ ಒಲೆ' ಹತ್ತಿರ ರಾತ್ರಿಯೆಲ್ಲಾ ಮಲಗುವಂತಹ ಹೀನ ವ್ಯವಸ್ಥೆಯನ್ನು ದೇವಯ್ಯ ಸ್ತ್ರೀ ಸಂವೇದನೆ ಹಿನ್ನೆಲೆಯಲ್ಲಿ ವಿರೋಧಿಸುತ್ತಾನೆ. ಮುಟ್ಟಾಗುವುದು ಒಂದು ಸಹಜ ಕ್ರಿಯೆ. ಹೆಣ್ಣಿನಲ್ಲಿ ಸರ್ವೆಸಾಮಾನ್ಯ. ಆದರೂ ಮೂಲೆಯಲ್ಲಿ ಹೋಗಿ ಮಲಗುವ ಆವಶ್ಯಕತೆ ಇಲ್ಲ. ಅದು ಮಲ, ಮೂತ್ರ ವಿಸರ್ಜನೆಯಷ್ಟೇ ಸಹಜಕ್ರಿಯೆ ಎಂಬುದು ದೇವಯ್ಯನ ಅಭಿಪ್ರಾಯ.

ಗಡ್ಡದಯ್ಯ ಭಾರತೀಯ ಸಂಸ್ಕೃತಿಯ ಪ್ರತೀಕವೆಂಬಂತೆ ಇದ್ದ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ತಲೆ ಮರೆಸಿಕೊಂಡು ಪೋಲಿಸರ ಕಣ್ಣುತಪ್ಪಿಸಿ ಓಡಾಡುತ್ತಿದ್ದ

ಎಂಬುದಕ್ಕೆ ಕಾದಂಬರಿಯ ಯಾವ ಉದಾಹರಣೆಯಿಂದಲೂ ದೃಢ ಅಭಿಪ್ರಾಯಕ್ಕೆ ಬರುವುದು ಸಾಧ್ಯವಾಗುವುದಿಲ್ಲ. ರಂಗಮ್ಮ ಹಾಗೂ ದೊಡ್ಡಣ್ಣರ ಪುತ್ರನಾದ ಧರ್ಮನನ್ನು ಆಶೀರ್ವಧಿಸುವಾಗ 'ದೊಡ್ಡಮನುಷ್ಯ ಕೀರ್ತಿವಂತನಾಗುತ್ತೀಯಾ' ಎಂದಿದ್ದರಂತೆ ಕಷ್ಟವೇ ಧರ್ಮವನ್ನು ಆಶೀರ್ವದಿಸುವಾಗ ದೊಡ್ಡ ಮನುಷ್ಯ ಕೀರ್ತಿವಂತನಾಗುತ್ತೀಯಾ ಎಂದಿದ್ದರಂತೆ. ಅಂತೆಯೇ ಮುಕುಂದಯ್ಯನಿಗೆ 'ನಿನ್ನ ಹಾಗೂ ಚಿನ್ನಮ್ಮನ ಹೊಟ್ಟೆಯಲ್ಲಿ ಹುಟ್ಟುವ ಮಗು ಮುಂದೆ ರಾಮಕೃಷ್ಣಾಶ್ರಮದ ಅಧ್ಯಕ್ಷನಾಗುತ್ತಾನೆ' ಎಂದು ಗಡ್ಡದಯ್ಯ ನುಡಿಯುತ್ತಾನೆ. ಭವಿಷ್ಯವಾಣಿಗಳನ್ನು ಕುವೆಂಪುರವರು ನಂಬಿಕೊಂಡದ್ದರ ಹಿನ್ನೆಲೆ ಏನು? ಎಂಬುದು ನಿಗೂಢವಾಗಿದೆ.

**ವ್ಯತಿರಿಕ್ತ ಭಾವನೆಗಳು:**

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕ್ರೈಸ್ತರ ಕಾರ್ಯಚಟುವಟಿಕೆಗಳ ಬಗ್ಗೆ ಸರ್ಕಾರದಿಂದ ಹೊಸದಾಗಿ ಬರುತ್ತಿದ್ದ ಕಾನೂನುಗಳು, ಶಿಕ್ಷಣದ ಕ್ರಮಗಳ ವಿವರಗಳು ಇತ್ಯಾದಿಗಳ ಬಗ್ಗೆ ಪಾದ್ರಿಗಳು ಜವಾಬ್ದಾರಿಯುತವಾಗಿ ನಡೆದುಕೊಳ್ಳುತ್ತಿದ್ದರು.

ಬೆಟ್ಟಳ್ಳಿ ಕಲ್ಲಯ್ಯ ಗೌಡರ ಮಗ ದೇವಯ್ಯ ಸಾಕಷ್ಟು ಸಿರಿವಂತ ಕುಟುಂಬದವನೇ ಆಗಿದ್ದ. ಆದ ಕಾರಣ ಪಾದ್ರಿ ಜೀವರತ್ನಯ್ಯ ತನ್ನ ಮಗಳನ್ನು ದೇವಯ್ಯನಿಗೆ ಎರಡನೇ ಸಂಬಂಧವಾದರೂ ಕೊಡಲು ಸಿದ್ಧನಿದ್ದ. ದೇವಯ್ಯನೂ ಒಳಮನಸ್ಸಿನಲ್ಲಿ ಜೀವರತ್ನಯ್ಯನ ಮಗಳನ್ನು ಇಷ್ಟ ಪಡುತ್ತಿದ್ದ. ದೇವಯ್ಯನಿಗೆ ಪಾದ್ರಿ ಮನೆಯವರು ನವನಾಗರಿಕರಂತೆ ಕಾಣುತ್ತಿದ್ದರು.

ದೇವಯ್ಯ ತಮ್ಮ ಮನೆಗೆ ಕಡಿಮೆ ಕ್ರಯದ ಯಾವ ವಸ್ತು ತಂದರೂ ಅತನ ತಂದೆಯಾದ ಕಲ್ಲಯ್ಯ ಗೌಡರು ಅದನ್ನು ಒಪ್ಪುತ್ತಿದ್ದರು. ಅಂದರೆ ಬಟ್ಟೆಬರೆ, ದಿನಸಿ ಸಾಮಗ್ರಿಗಳ ವಿಷಯದಲ್ಲಿ ಒಂದು ರೀತಿ ಕಲ್ಲಯ್ಯಗೌಡರು ತಮಗೇ ಅರಿವಿಲ್ಲದಂತೆ ಹೊಸ ವಿಷಯಗಳಿಗೆ ಮನಸ್ಸು ಕೊಡುವುದನ್ನು ಕಾಣಬಹುದು. ಇಲ್ಲಿ ದೇವಯ್ಯನಿಂದ ಕಲ್ಲಯ್ಯಗೌಡರು ಪ್ರೇರಿತರಾದಂತೆಯೂ ಕಂಡು ಬರುತ್ತದೆ.

ದೇವಯ್ಯ ಮನೆಗೆ ದೊಡ್ಡ ಗಡಿಯಾರ ತರುವುದು, ಕ್ರಾಪ್ ಬಿಡುವುದು ತಂದೆಗೆ ಇಷ್ಟವೇ. ದೇವಯ್ಯ ಯಾರ ಹಂಗಿಗೂ ಒಳಪಡುವುದಿಲ್ಲ. ಸಮಾಜ ಸುಧಾರಕನಂತೆ ವರ್ತಿಸುತ್ತಾನೆ. ಅವನಾಡುವ ಮಾತು ಆಧುನಿಕತೆಗೆ ಕನ್ನಡಿ ಹಿಡಿದಂತಿದೆ. "ತನ್ನದಾದರೂ

ಏನು ತಪ್ಪು? ಮಗುವಿನ ಜ್ವರಕ್ಕೆ ಔಷಧಿಕೊಟ್ಟು ಗುಣಪಡಿಸುವುದಕ್ಕೆ ಬದಲು ತಾಯಿತ ಕಟ್ಟಿದ್ದನ್ನು ಕಿತ್ತು ಹಾಕಿದ್ದು ತಪ್ಪೆ? ದೃಷ್ಟಿಮಣಿಯ ಹೆಸರಿನಲ್ಲಿ ಕೂಸಿನ ಕೊರಳಿಗೆ ರೂಪಾಯಿ ನಾಣ್ಯಗಳ ಭಾರವಾದ ಸರವನ್ನು ಹಾಕಿ, ಅದಕ್ಕೆ ಜೊಲ್ಲಿನ ವಾಸನೆ, ಕಕ್ಕು, ಹೇಲು, ಉಚ್ಚೆ, ಮಣ್ಣು, ಕೊಳೆ ಎಲ್ಲಾ ಹಿಡಿದು ಅಸಹ್ಯವಾಗಿದ್ದದ್ದನ್ನು ತೆಗೆದೆಸೆದದ್ದು ತಪ್ಪೆ? ಧರ್ಮದ ಹೆಸರಿನಲ್ಲಿ ಆರೋಗ್ಯ ಮತ್ತು ನೈರ್ಮಲ್ಯಗಳನ್ನು ನಿರ್ಲಕ್ಷಿಸಿದ್ದನ್ನು ಖಂಡಿಸಿದ್ದು ತಪ್ಪೇ? ಕಲ್ಲು ಮಣ್ಣನ್ನು ದೇವರೆಂದು ನಂಬಿ ಪೂಜಿಸಿ, ಹಾಳಾಗುತ್ತಿದ್ದಾರಲ್ಲ ಎಂದು ತುಳಸಿಯ ಕಟ್ಟೆಯನ್ನು ಕಿತ್ತುಹಾಕಲು ಹೋಗಿದ್ದು ಸ್ವಲ್ಪ ತಪ್ಪಿರಬಹುದು! ಆದರೆ ಆ ಜೋಯಿಸ ಇವರಿಂದ ಸತ್ಯನಾರಾಯಣ ವ್ರತ ಮಾಡಿಸಿ ಸುಳ್ಳುಸುಳ್ಳು ಕಟ್ಟುಕತೆಗಳನ್ನು ಪುರಾಣ ಎಂದು ಹೇಳಿ ತನ್ನವರಿಗೆ ಸಂತರ್ಪಣೆ ಮಾಡಿಸಿ ಇವರು ದಾರಿ ತಪ್ಪಿಸುವುದಲ್ಲದೆ ದಿಕ್ಕನ್ನೂ ತಪ್ಪಿಸುತ್ತಿದ್ದಾನಲ್ಲಾ! ಅದನ್ನು ತಡೆದದ್ದು ತಪ್ಪೇ?" (ಮ.ಮ. ೨೧೪) ಕ್ರೈಸ್ತ ಮತದ ಬಗ್ಗೆ ದೇವಯ್ಯನಿಗಿದ್ದ ಆಕರ್ಷಣೆ, ಬ್ರಾಹ್ಮಣ ವರ್ಗದ ಬಗ್ಗೆ ಇದ್ದ ತಿರಸ್ಕಾರ ಈ ಮಾತಿನಲ್ಲಿ ವ್ಯಕ್ತವಾಗುವುದರ ಜೊತೆಗೆ ವೈಚಾರಿಕತೆ, ದೂರದೃಷ್ಟಿ, ಶುಚಿತ್ವ, ಆಧುನಿಕ ಯೋಚನಾ ಶಕ್ತಿಗಳು ಈ ಮಾತಿನ ಮುಖಾಂತರ ಪರಿಚಯವಾಗುತ್ತವೆ.

"ದೇವಯ್ಯನಿಗೆ ವ್ಯತಿರಿಕ್ತವಾದ ಇನ್ನೊಂದು ಪಾತ್ರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುತ್ತದೆ. ಬೆಟ್ಟಳ್ಳಿ ದೇವಯ್ಯ ಒಂದು ಕೊನೆಯಲ್ಲಿ ನಿಂತರೆ, ಹೆಂಚಿನಮನೆಯ ಶಂಕರಪ್ಪ ಹೆಗ್ಗಡೆ ಇನ್ನೊಂದು ತುದಿಯಲ್ಲಿ ನಿಲ್ಲುತ್ತಾನೆ. ಕ್ರೈಸ್ತ ಮಿಷಿನರಿಗಳ ಮುಖಾಂತರ ಬರುತ್ತಿದ್ದ ಹೊಸ ಅಲೆಗಳ ಪ್ರಭಾವಕ್ಕೆ ಸಿಕ್ಕಿ ದೇವಯ್ಯ ಹಿಂದೂ ಸಂಪ್ರದಾಯದ ಸಂಕೋಲೆಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದರೆ, ಆತನ ಚಿಕ್ಕಪ್ಪನ ಮಗನಾದ ಶಂಕರಪ್ಪ ಬ್ರಾಹ್ಮಣಿಕೆಯ ಪ್ರಭಾವಕ್ಕೆ ಸಿಕ್ಕಿ ಮತ್ತಷ್ಟು ಅದರ ಆಳಕ್ಕೆ ನುಸುಳುತ್ತಾನೆ. ಇಬ್ಬರೂ ಜಾತಿಯಿಂದ ಒಕ್ಕಲಿಗರೆ. ಬೆಟ್ಟಳ್ಳಿ ದೇವಯ್ಯ ಮತ್ತು ಅವನ ಮನೆಯವರನ್ನು ಕಂಡರೆ ಶಂಕರಪ್ಪ ಹೆಗ್ಗಡೆಗೆ ತಾತ್ಸಾರ. ಕಾದಂಬರಿಯಲ್ಲಿ ಬರುವ ಮಾತುಗಳನ್ನು ಗಮನಿಸಬಹುದು "ಜಾತಿ, ನೀತಿ, ಪೂಜೆ, ಪುನಸ್ಕಾರ, ಬಿರಾಂಬರು, ದೇವರು, ದೆಯ್ಯ, ಆಚಾರ ಕಟ್ಟಳೆಗಳಲ್ಲಿ ಸಂಪ್ರದಾಯ ನಿಷ್ಠೆಯ ನೇರಾನುಯಾಯಿಯಾಗಿದ್ದ ಶಂಕರಪ್ಪ ಹೆಗ್ಗಡೆಗೆ ಪಾದ್ರಿಗಳನ್ನೆಲ್ಲ ಮನೆಗೆ ಸೇರಿಸಿ, ಅವರೊಡನೆ ಸಹಪಂಕ್ತಿ ಭೋಜನವನ್ನು ಮಾಡಿ, ಅವರು ಕೊಟ್ಟ ವಿಲಾಯಿತಿ ವಸ್ತುಗಳನ್ನೆಲ್ಲ (ಲಾಟೀನು, ಬೈಸಿಕಲ್ಲು, ತೋಟಾಕೋವಿ, ಸೀಮೆ ಬಿಸ್ಕಿತ್ತು, ಕ್ರಾಪು, ಹ್ಯಾಟು, ಬೂಟು ಇತ್ಯಾದಿ ಇತ್ಯಾದಿ) ತಿರುಪತಿ ಧರ್ಮಸ್ಥಳಗಳ ದೇವರ ಕಾಣಿಕೆ

ಇಟ್ಟಿರುವ ಮನೆಯ ಒಳಗೆ ತಂದಿಟ್ಟುಕೊಂಡ ಹಾಗೂ ಕುಲಗೆಟ್ಟು ಹೋಗಿರುವ ಬೆಟ್ಟಳ್ಳಿಯವರನ್ನು ಕಂಡರೆ ತಿರಸ್ಕಾರ, ಜಿಗುಪ್ಸೆ. ಹೀಗೆ ಆಧುನಿಕ ಗಾಳಿ ಬೀಸುತ್ತಿದ್ದ ಸಂದರ್ಭದಲ್ಲಿ ಭಾರತೀಯ ಸಾಮಾಜಿಕ ಸಂರಚನೆಯ ಒಳಗಡೆ ಸಂಸ್ಕೃತೀಕರಣಗೊಳ್ಳುವ ಶೂದ್ರರನ್ನು ಶಂಕರಪ್ಪ ಹೆಗ್ಗಡೆ ಪ್ರತಿನಿಧಿಸಿದರೆ, ಇನ್ನೊಂದು ವಿರುದ್ಧ ದಿಕ್ಕಿನಲ್ಲಿ ಬ್ರಿಟೀಷರ ಆಡಳಿತ ಮತ್ತು ಕ್ರೈಸ್ತ ಮಿಷಿನರಿಗಳ ಮೂಲಕ ಆಗತಾನೆ ಮೆಲ್ಲಗೆ ಪ್ರವೇಶಿಸುತ್ತಿದ್ದ ನವ ನಾಗರಿಕತೆಯ ಪ್ರಭಾವಗಳಿಗೆ ಮಾರುಹೋದ ಶೂದ್ರರನ್ನು ದೇವಯ್ಯ ಪ್ರತಿನಿಧಿಸುತ್ತಾನೆ.

"ದೇವಯ್ಯ ಶಂಕರಪ್ಪ ಹೆಗ್ಗಡೆ ಒಬ್ಬರನ್ನೊಬ್ಬರು ದ್ವೇಷಿಸಿದರೂ ದೇವಯ್ಯ ಕೊನೆಯಲ್ಲಿ ಹಿಂದುವಾಗಿದ್ದುಕೊಂಡು ಬ್ರಾಹ್ಮಣರ ಏರಿಕೆಯನ್ನು ತಿರಸ್ಕರಿಸುತ್ತಾನೆ" ಎಂಬ ಅಶ್ವತ್ಥನಾರಾಯಣರ ಹೇಳಿಕೆ (ಕುವೆಂಪು 90, ಪುಟ ೪೧) ಸತ್ಯವಾದರೂ ದೇವಯ್ಯನದು ಚಪಲ ಮನಸ್ಸು. ಈಗಾಗಲೇ ಕಾವೇರಿಯನ್ನು ಇಷ್ಟಪಟ್ಟಂತೆ ಅವನ ಜೀನವದಲ್ಲಿ ಅದೆಷ್ಟು ಹೆಂಗಸರು ಬಂದು ಹೋಗಿದ್ದಾರೋ ಆತನಿಗೆ ತಿಳಿಯದು. ಹೆಂಡತಿಯ ಪ್ರೀತಿಯನ್ನು ಮನೆತನದ ಗೌರವವನ್ನು ದೇವಯ್ಯ ಉಳಿಸಿಕೊಳ್ಳಬೇಕಿತ್ತು. ಜೊತೆಗೆ ತನ್ನ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕಾಗಿದ್ದು ಮುಖ್ಯವಾಗಿತ್ತು.

**ಕಾಮ:**

ಅಂತಕ್ಕನ ಮಗಳು ಕಾವೇರಿ ಗುತ್ತಿಯನ್ನು ನೋಡುವ ದೃಷ್ಟಿ ಹದಿಹರೆಯದ ಕೊಂಬಿನ ಚೆಲುವಿನ ಹೋರಿ ಮಿಗವನ್ನು ಮೆಚ್ಚಿ ನೋಡುವಂತೆ ಇತ್ತು. ಕಾವೇರಿ ಗುತ್ತಿಯ ಮೇಲೆ ಆಕರ್ಷಿತಳಾಗುತ್ತಾಳೆ. ಆದರೆ ಆತ ಕೇವಲ ಕೆಳಜಾತಿಯವನೆಂದು ನೋಡುವುದು ಆಸೆ ಆಸೆಯೇ. 'ಕಾಮಕ್ಕೆ ಕಣ್ಣಿಲ್ಲ' ಎಂಬ ಮಾತು ನಿಜವಾಗಬಹುದೇನೋ. ಇದು ಕಾಮಕೇಂದ್ರಿತ ದೃಷ್ಟಿ ಎಂಬುದರಲ್ಲಿ ಅನುಮಾನವಿಲ್ಲ.

ಗುತ್ತಿ ತಿಮ್ಮಿ ತಮ್ಮ ಇಷ್ಟಸಾಧನೆಗಾಗಿ ಪರಸ್ಪರ ಪ್ರೀತಿಯನ್ನು ಉಳಿಸಿಕೊಳ್ಳಲು ತಿಮ್ಮಿಯ ತಂದೆ ಒಪ್ಪದಿದ್ದಾಗ ತಾಯಿಯ ಸಹಾಯದಿಂದ ತಿಮ್ಮಿ ಮನೆಬಿಟ್ಟು ಓಡಿ ಹೋಗುತ್ತಾಳೆ. ಕಾಡಿನ ಮಧ್ಯೆ ಉಳಿದಾಗ ಗುತ್ತಿಯೊಂದಿಗೆ ರಾತ್ರಿ ಕಳೆಯುವ ಸಂದರ್ಭದಲ್ಲಿ ತನ್ನ ಕೇರಿಯ ಸಿಂಭಾವಿಭಾವ ಬಚ್ಚ ತನಗೆ ಮಾಡಿದಂತೆ ಮಾಡುತ್ತಾನೆಂಬ ನಿರೀಕ್ಷೆಯಲ್ಲಿದ್ದಳು. ಗುತ್ತಿಯೂ ಸಣ್ಣಬೀರನ ಮಗಳು ಪುಟ್ಟಿಯೊಂದಿಗೆ ಹುಲ್ಲು ಬಣವೆ ಹಿಂದೆ ಮಾಡಿದ್ದಂತೆ ತಿಮ್ಮಿಯೂ ಮಾಡುತ್ತಾಳೆಂಬ ನಿರೀಕ್ಷೆಯಲ್ಲಿ ಇದ್ದನು. ಆದರೆ ಇಬ್ಬರಿಗೂ ತಾವೇ ಮೊದಲು ಮುಂದುವರಿಯಲು ಸಂಕೋಚ.

ಪೀಂಚಲು ಮುಂಕುಂದಯ್ಯನನ್ನು ಬಯಸಿದ್ದರೂ ತಿಮ್ಮಿ ಬಚ್ಚನನ್ನು ಕೂಡಿದ್ದರೂ ಅವರನ್ನು ಕುಲಟೆಯರೆನ್ನಲು ಸಾಧ್ಯವಿಲ್ಲ. ಅವರ ಜೀವನ ಶೈಲಿಯೇ ಹಾಗಿತ್ತು. ಅವರ ಸಂಸ್ಕೃತಿಯೇ ಹಾಗೆ.

ತಿಮ್ಮಪ್ಪ ಹೆಗ್ಗಡೆ ಐತನ ಆಗಮನವನ್ನು 'ಪೀಂಚಲು ಗಂಡನೂ ಬಂದುಬಿಟ್ಟಾನೆ' ಎನ್ನುವಲ್ಲಿ ಹಾಗೂ 'ಜೇನು ಕೀಳುವುದರಲ್ಲಿ ನಿನ್ನ ಹೆಂಡತಿ ಗಟ್ಟಿಗಿತ್ತಿಯಂತೆ, ಅವಳನ್ನು ಕರೆದುಕೊಂಡು ಜೇನು ಬಿಡಿಸಲು ಬಾ' ಎಂದು ಹೇಳುವಲ್ಲಿ ತಿಮ್ಮಪ್ಪ ಹೆಗ್ಗಡೆಯ ಮಾತಿಗೆ ಅಲ್ಲಿದ್ದ ಹೆಂಗಸರೆಲ್ಲಾ ನಕ್ಕಿದ್ದರಂತೆ ಎಳೆ ಹೆಣ್ಣುಗಳ ವಿಷಯದಲ್ಲಿ ಅವನ ಸ್ವಭಾವ ಎಲ್ಲರಿಗೂ ಗೊತ್ತಿತ್ತು. ಹೆಣ್ಣುಬಾಕ ಎಂದು. ಈ ಮೊದಲು ಸಣ್ಣ ಬೀರನ ಮಗಳು ಪುಟ್ಟಿಯನ್ನು ಬಣವೆ ಹಿಂದೆ ಆತ ಕೆಡಿಸಿರುತ್ತಾನೆ. ಇದೀಗ ತಿಮ್ಮಪ್ಪನ ವಕ್ರದೃಷ್ಟಿ ಪೀಂಚಲು ಮೇಲು ಬಿದ್ದಿದೆ ಎಂಬುದನ್ನು ಆತನ ಮಾತು ಸೂಚಿಸುತ್ತದೆ. ಮಂಜಮ್ಮನೇ ಇವನನ್ನು ಮೂದಲಿಸುತ್ತಾ 'ಅವರು ಈಗಂತೂ ಸಣಬಿನ ನಾಯಿ ಹಲುಬಿನ ಎತ್ತಿಗಿಂತ ಅತ್ತತ್ತ ಆಗಿಬಿಟ್ಟಾರೆ, ಹಳೇ ಪೈಕದವರೋ? ಹೋಲೇರೋ, ಸೆಟ್ರೋ? ಹಸಲೋರೋ? ಬಿಲ್ಲೋರೋ? ಕಡೀಗೆ ಕಿಲಸ್ತರು, ಸಾಬರೋ? ಯಾರಾದರೂ ಸೈ ಹೆಣ್‌ಜಾತಿ ಆಗಿಬಿಟ್ರೆ ಸೈ. ಮನೆಕೆಲಸಕ್ಕಿರೋ ಹಳೆಪೈಕದ ಹೂವಿ ಹಡಬೇ ಹಾದರಗಿತ್ತಿ. ಅದನ್ನು ಪೂರೈಸಿ ಈಗ ನಮ್ಮ ಕೇರೀಗೆ ಕೈ ಹಾಕ್ಯಾರೆ.' ಎನ್ನುತ್ತಾಳೆ. ಅಶ್ಲೀಲತೆ ಅವರ ಬದುಕಿನ ಭಾಗವೋ ಎಂಬಂತೆ ಕಾಣಿಸಿಕೊಳ್ಳುವಷ್ಟರ ಮಟ್ಟಿಗೆ ಮಲೆಗಳಲ್ಲಿ ಮದುಮಗಳು ಕಾದಂಬರಿ ಮಲೆನಾಡಿನ ಕಾಮದ ಮೇಲೆ ಬೆಳಕು ಚೆಲ್ಲುತ್ತದೆ.

'ಚೆನ್ನಾಗಿ ಮೀಯಿಸಿ, ಶುಚಿಯಾಗಿಟ್ಟು ಒಳ್ಳೆಯ ಆಹಾರ ತಿನ್ನಿಸಿ ಸಾಕಿದ್ದ ಮನೆಯ ಚೀನಿನಾಯಿ ಸಣುಬಿನ ಸಮಯ ಬಂದಾಗ ದದ್ದು ಹಿಡಿದು ವಿಕಾರವಾಗಿದ್ದರೂ ಲೆಕ್ಕಿಸದೆ ಬೀದಿಯ ನಾಯಿಯ ಸಂಗ ಸರಪಳಿ ಕಂಪೌಂಡುಗಳಿಂದ ನುಣುಚಿಕೊಂಡು ಪೋಲಿಬೀಳುವಂತೆ ತಿಮ್ಮಪ್ಪ ಕೀಳು ಜಾತಿಯುವರ ಹಟ್ಟಿಬಿಡಾರ ಗುಡಿಸಲು ಜೋಪಡಿಗಳಲ್ಲಿಯೂ ಸುಖವನ್ನರಸಿ ಪಡೆದಿದ್ದನು.'

ತಿಮ್ಮಪ್ಪ ಹೆಗ್ಗಡೆಯ ಮುನ್ನಡೆ ಹೇಗಾಗಿದೆ ಎಂದರೆ ತನ್ನ ಜಾತಿಗೆ ಸೇರಿದ್ದ ಒಂದು ಹೆಣ್ಣನ್ನು ಮದುವೆಯಾಗಿ ಸಮಾಜದ ಕಣ್ಣಿಗೆ ಎಲ್ಲರಂತೆ ಗೌರವಯುತವಾಗಿ ಗೌಡಿಕೆ ಮಾಡಿಕೊಂಡಿದ್ದರಾಯಿತು ಎಂಬ ಭಾವನೆ, ಆತನಲ್ಲಿತ್ತು. ತನಗೆ ಲಕ್ಕಮ್ಮನೇ ಬೇಕು ಎಂಬ ಹಟವಿಲ್ಲ; ಒಟ್ಟಾರೆ ಒಂದು ಹೆಣ್ಣು ಬೇಕಾಗಿದೆ. ಇವನದು ಆಂತರ್ಯದಿಂದ

ಬಂದ ಪ್ರೀತಿಯಾಗಿರದೆ ತಕ್ಷಣ ಪಡೆವ ಕಾಮವಾಗಿದೆ. ನವೋದಯ ಸಾಹಿತ್ಯ ರಮ್ಯ ವಿಷಯಗಳಿಗೆ ಮನ್ನಣೆ ನೀಡಿದೆ. ಕುವೆಂಪುರವರು ಅಶ್ಲೀಲತೆಯನ್ನು ಬಳಸುವ ಸಂದರ್ಭದಲ್ಲಿ ಸೌಮ್ಯವಾಗಿ ರಮ್ಯವಾಗಿ ಸಂಸ್ಕೃತ ಭೂಯಿಷ್ಠವಾಗಿ ಹೇಳುವುದನ್ನು ನೋಡಿದರೆ ಆ ಕಾಲಘಟ್ಟದ ಸಮಾಜದ ಬಗ್ಗೆ ಎಚ್ಚರವಿದೆ ಎಂದು ಗೊತ್ತಾಗುತ್ತದೆ. ರಮಣೀಯವಾಗಿ ಹೇಳುವ ಮುಖಾಂತರ ಜನ ಮನ್ನಣೆ ಪ್ರೀತಿಗಳಿಸುವ ಉದ್ದೇಶವಿತ್ತು ಎಂಬ ಅನುಮಾನ ಸೃಷ್ಟಿಯಾಗುತ್ತದೆ. ಅಂದರೆ ಯಾವುದೇ ಒಂದು ವರ್ಗ (ಜನಾಂಗ)ವನ್ನು ಎದುರು ಹಾಕಿಕೊಳ್ಳಲು ಅವರಿಗೆ ಇಷ್ಟವಿರಲಿಲ್ಲ ಎಂದು ಅನಿಸುತ್ತದೆ. ಡಾ. ಯು.ಆರ್. ಅನಂತಮೂರ್ತಿಯವರ 'ಸಂಸ್ಕಾರ' ಕಾದಂಬರಿಯ ಪ್ರಾಣೇಶಾಚಾರ್ಯರು ಒಮ್ಮಿದ್ದೊಮ್ಮೆಲೆ ಚಂದ್ರಿಯನ್ನು ಕೂಡುವ ಸನ್ನಿವೇಶವನ್ನು ತಂದಿರುವಂತೆ ಇಲ್ಲೂ ಕೂಡ ನೇರವಾಗಿ ಕಾಮದ ಸನ್ನಿವೇಶಗಳನ್ನು ತಂದಿದ್ದಾರೆ. ಉದಾ: ತಿಮ್ಮಪ್ಪ ಹೆಗ್ಗಡೆಯ ಅನೈತಿಕ ಸಂಬಂಧಗಳು.

ಚಿನ್ನಮ್ಮನ ಮದುವೆ ಭರಮೈ ಹೆಗ್ಗಡೆಯವರೊಂದಿಗೆ ನಿಶ್ಚಯವಾಗಿದ್ದು ಮದುವೆಯ ದಿನ ರಾತ್ರಿಯೇ ಪೀಂಚಲುವನ್ನು ಕೂಡಿಕೊಂಡು ಫಲಾಯನ ಮಾಡಲು ಸಿದ್ಧಳಾಗುತ್ತಾಳೆ. ಇದಕ್ಕೆ ದೇವಯ್ಯನ ಕುಮ್ಮಕ್ಕೂ ಸೇರಿಕೊಂಡಿರುತ್ತದೆ.

ಮುಕುಂದಯ್ಯ ಹೇಗಾದರೂ ಮಾಡಿ ಚಿನ್ನಮ್ಮನ ಮದುವೆಯನ್ನು ತಡೆಹಿಡಿದು ರಾತ್ರೋ ರಾತ್ರಿ ಆಕೆಯನ್ನು ಕರೆದುಕೊಂಡು ಹೋಗಲು ಐತ ಪೀಂಚಲು–ಇವರ ಸಹಾಯ ಪಡೆಯುತ್ತಾನೆ. ಮದುವೆಯ ರಾತ್ರಿ ಆ ಸುರಿವ ಮಳೆಯಲ್ಲಿ ಪೂರ್ವ ನಿರ್ಧಾರದಂತೆ ಐತ ಹೊರಗೆ ನಿಂತು ಕಾಯುವುದು. ಅಲ್ಲಿದ್ದ ಹಂಡೆಗಳಿಗೆ ಬಡಿಗೆಯಿಂದ ಬಡಿದಾಗ ಚಿನ್ನಮ್ಮ ಪೀಂಚಲುವಿನೊಂದಿಗೆ ಹೊರಬರುವುದೆಂದು ನಿರ್ಧಾರವಾಗಿತ್ತು. ಇದಕ್ಕೆ ಮನೆಯಲ್ಲಿ ನಾಗಕ್ಕನ ಬೆಂಬಲ ಇದ್ದೇ ಇತ್ತು.

ಪೂರ್ವ ನಿರ್ಧಾರದಂತೆ ಹಂಡೆಗೆ ಬಡಿದ ಸದ್ದಾಯಿತು. ನೋಡಿದರೆ ಇನ್ನೂ ಆಟವಾಡುತ್ತಿದ್ದ ಹುಡುಗ ಕತ್ತಲಾಗಿಲ್ಲ. ತಿಮ್ಮ ಹಂಡೆಗೆ ಬಡಿಯುತ್ತಾನೆ. ನಾಗಕ್ಕ ಹೊರಗೆ ನೋಡಿ ಬಂದು 'ಹೌದು ಇದು ಕೋಣೂರು ತಮ್ಮಯ್ಯನದೇ ಕೆಲಸ.' ಎಂದಾಗ ಚಿನ್ನಮ್ಮನಿಗೆ ಸ್ವಲ್ಪ ಸಮಾಧಾನವಾಗುತ್ತದೆ. ಪೀಂಚಲು ರಾತ್ರೋ ರಾತ್ರಿ ಹುಲಿಕಲ್ ನೆತ್ತಿಯಿಂದ ಚಿನ್ನಮ್ಮನನ್ನು ಕರೆದುಕೊಂಡು ಹೋಗುತ್ತಾಳೆ. ಚಿನ್ನಮ್ಮ ಮೇಲ್ವರ್ಗದವಳಾದರೂ ಪೀಂಚಲುವಿನ ಸಹಾಯ ಪಡೆಯುವುದು ಆಶ್ಚರ್ಯಕರ. ಮಗಳು ಕಾಣೆಯಾದ ಕಾರಣದಿಂದ

ವೆಂಕಟಣ್ಣನ ಪ್ರಾಣಪಕ್ಷಿ ಹಾರಿ ಹೋಗುತ್ತದೆ. ಇನ್ನೊಂದು ಸಂದರ್ಭದಲ್ಲಿ ಚಿನ್ನಮ್ಮ ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಂಡು ಹರ್ಷ ವ್ಯಕ್ತಪಡಿಸುತ್ತಾಳೆ. ಆ ಕನ್ನಡಿಯನ್ನು ಮುಕುಂದಭಾವ ತಂದುಕೊಟ್ಟಿದ್ದು. ಕನ್ನಡಿ ನೋಡಿಕೊಳ್ಳುವುದೂ ಅಪರಾಧವಾಗಿದ್ದ ಕಾಲವಾಗಿತ್ತದು ಕನ್ನಡಿ ನೋಡಿಕೊಳ್ಳುವವರು ಸೂಳೆಯರು ಮಾತ್ರ ಎಂಬ ಅಭಿಪ್ರಾಯವಿದ್ದ ಕಾಲದಲ್ಲಿ ಚಿನ್ನಮ್ಮ ಕದ್ದುಮುಚ್ಚಿ ಕನ್ನಡಿಯಲ್ಲಿ ಮುಖನೋಡಿಕೊಳ್ಳುತ್ತಿದ್ದಳು. 'ಆಹಾ ಎಷ್ಟು ಚನ್ನಾಗಿದೆ ನನ್ನ ಮುಖ. ನನ್ನವ್ವ ಹೀಗೆ ಇದ್ದಳಂತೆ. ಕೈ ತೊಳೆದುಕೊಂಡು ಮೈ ಮುಟ್ಟಬೇಕು. ಇಂಥವಳನ್ನು ಹೊಡೆಯಲು ಮನಸ್ಸಾದರೂ ಹೇಗೆ ಬರುತ್ತಿತ್ತು? ಚಿನ್ನಮ್ಮ ನೀರಿನಲ್ಲಿ ಪ್ರತಿಬಿಂಬ ನೋಡಿಕೊಳ್ಳುತ್ತಿದ್ದಳು ತಾನೂ ಇಷ್ಟು ಚೆನ್ನಾಗಿದ್ದೇನೆಂದು ಅವಳಿಗೆ ಗೊತ್ತಿರಲಿಲ್ಲ. ಕೆಲವರಿಗೆ ತಾನು ಇಷ್ಟೊಂದು ಸುಂದರವಾಗಿದ್ದೇನೆಂದು ಗೊತ್ತಿರುವುದಿಲ್ಲ. ಹಾಗೆಯೇ ಚಿನ್ನಮ್ಮನೂ ಸೌಂದರ್ಯ ಪ್ರಜ್ಞೆ ಕಡಿಮೆ ಇದ್ದವಳಾಗಿದ್ದಳು. ಆದರೂ ನೀರಿನಲ್ಲಿ ಮುಖನೋಡಿಕೊಳ್ಳುವಂತಹ ಕಾಲದಿಂದ ಕನ್ನಡಿಯಲ್ಲಿ ಮುಖನೋಡಿಕೊಳ್ಳುವ ಹಂತವನ್ನು ತಲುಪಿದ್ದು ಆಧುನಿಕತೆಯನ್ನು ಸೂಚಿಸುತ್ತದೆ.

ಮುಕುಂದಯ್ಯ ಹೂವಳ್ಳಿ ಮನೆಯ ಯಜಮಾನಿಕೆ ವಹಿಸಿಕೊಂಡು ಆ ಮನೆಯ ಎಲ್ಲ ವ್ಯವಹಾರಗಳನ್ನು ತಾನೇ ನಿರ್ವಹಿಸುತ್ತಿದ್ದಾನೆ. ಕಾದಂಬರಿಯ ಕೊನೆಯಲ್ಲಿ ಚಿನ್ನಮ್ಮ ಪುಷ್ಪವತಿಯಾಗುವುದು. ಹಾಗೆಯೇ ಚಿನ್ನಮ್ಮ ಮುಂದಿನ ಜೀವನಕ್ಕೆ ಸಿದ್ದಳಾಗುತ್ತಾಳೆ. ಚಿನ್ನಮ್ಮ ಮುಕುಂದಯ್ಯನ ಒಲಿದ ಹೃದಯವನ್ನು ಪೂರ್ಣವಾಗಿ ಅರ್ಥೈಸಿಕೊಳ್ಳುತ್ತಾಳೆ. ಅವರಿಗೆ ಸಹಕರಿಸಿದ ಐತ-ಪೀಂಚಲು, ಗುತ್ತಿ ಇವರ ಸಂಬಂಧಗಳ ಕುರಿತು ಶ್ರೀಕೃಷ್ಣ ಆಲನಹಳ್ಳಿ ಅವರು 'ಒಡೆಯ-ಆಳು ಬಿಲ್ಲವರು, ನಾಮಧಾರಿ ಗೌಡರು ಎನ್ನುವ ಮುಖ್ಯವಲ್ಲದ ವಿಚಾರಗಳು ದೂರವಾಗಿವೆ,' ಎಂದು ಅಭಿಪ್ರಾಯ ಪಡುತ್ತಾರೆ.

ಪ್ರೀತಿಗೆ ಜಾತಿಭೇದಗಳಿಲ್ಲ. ಅದು ಒಲಿದ ಹೃದಯಗಳಿಗೆ ಸಂಬಂಧಿಸಿದ ವಿಷಯ. ನಿಜವಾದ ಪ್ರೀತಿಗೆ ಸಾವಿಲ್ಲ. ಇಂತಹ ಅನೇಕ ಇತ್ಯಾತ್ಮಕ ವಿಚಾರಗಳು ಕಾದಂಬರಿಯಲ್ಲಿ ಕಾಣಸಿಗುತ್ತವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಾಣುವಷ್ಟು ಲೈಂಗಿಕತೆ ಅಥವಾ ಹೆಣ್ಣು-ಗಂಡಿನ ಸಂಬಂಧಗಳು ಕನ್ನಡದ ಯಾವುದೇ ಕಾದಂಬರಿಯಲ್ಲೂ ಇಷ್ಟೊಂದು ಮಗ್ಗುಲುಗಳಲ್ಲಿ ವ್ಯಾಖ್ಯಾನವಾಗಿಲ್ಲ. ಕಾಮವು ಪ್ರಕೃತಿದತ್ತವಾದುದು. ಅದನ್ನು

ಸಂಸ್ಕರಿಸಿಕೊಳ್ಳುವುದು ಪ್ರತಿಯೊಂದು ಸಮಾಜದ ಸಾಂಸ್ಕೃತಿಕ ಜವಾಬ್ದಾರಿ. ಮನುಷ್ಯ ಪ್ರಕೃತಿಯನ್ನು ಸಂಸ್ಕೃತಿಯನ್ನಾಗಿಸಿಕೊಳ್ಳುವ ಪ್ರಯತ್ನಗಳೇ ಈ ಕಾದಂಬರಿಯ ತುಂಬಾ ವಿವಿಧ ರೀತಿಯ ಕಾಮವಿನ್ಯಾಸಗಳಾಗಿ ಮೂಡಿರುವುದು. ಜೀತದಾಳುಗಳು ಅಸ್ಪೃಶ್ಯರೇ ಆಗಿದ್ದರೂ ಕಾದಂಬರಿಯಲ್ಲಿ ಬರುವ ಸುಬ್ಬಣ್ಣ ಹೆಗ್ಗಡೆಯವರ ಮಗ ತಿಮ್ಮಪ್ಪ ಹೆಗ್ಗಡೆ ಆ ವಿಚಾರದಲ್ಲಿ ಯಾವ ಜಾತಿ ಮತ ಸಂಪ್ರದಾಯದ ಕಟ್ಟುಪಾಡನ್ನು ಇಟ್ಟುಕೊಂಡಿರಲಿಲ್ಲ. ನಾಗತ್ತೆಯ ಲೈಂಗಿಕ ವಿಕ್ಷಿಪ್ತತೆ – ತನ್ನ ವಿಧವೆಯಾದ ಸೊಸೆ ನಾಗಕ್ಕನನ್ನು ಲೈಂಗಿಕತೆಗೆ ಇಳಿಸಲು ಬಳಸುವ ವಾಮಮಾರ್ಗ, ಪುಟ್ಟನ ಅತ್ತೆ ಕಾಡಿಯುಮುಂಡೆಯಾಗಿದ್ದು ಬಸುರಾದದ್ದು, ವೆಂಕಟಣ್ಣನ ಪಶುಸದೃಶ ಲೈಂಗಿಕತೆ, ಸೂಕ್ಷ್ಮಪ್ರಕೃತಿಯ ಚಿನ್ನಮ್ಮನ ಸ್ಥುರದ್ರೂಪಿ ತಾಯಿಯ ಎಳೆಹರೆಯದ ಸಾವಿನ ಹಿಂದಿನ ಕಥೆ, ಚೀಂಕ್ರ ಬಸುರಿ ಹೆಂಡತಿಯನ್ನೇ ಲೈಂಗಿಕ ಕ್ರಿಯೆಯಲ್ಲಿ ತೊಡಗಿಸಿ ಸಾಯಿಸಿದ್ದು, ಮುಕುಂದಯ್ಯನ ಅಣ್ಣ– ಮಹಾಭಾರತ ರಾಮಾಯಣಗಳನ್ನು ತಿಳಿದಿದ್ದವನೂ–ಒಮ್ಮೆ ನಾಗಕ್ಕನನ್ನು ಸೀರುಡಿಕೆಮಾಡಿಕೊಳ್ಳಬಯಸಿದ್ದು, ದೇವಯ್ಯ–ಕಾವೇರಿ– ಜ್ಯೋತಿರ್ಮಣಿಯರ ಸಂಬಂಧಗಳು, ಶಿವ–ಶಿವಾನಿಯಂತೆ ಕಾಣುವ ಐತ–ಪೀಂಚಲು, ಇತ್ಯಾದಿ. ಅಂತೆಯೇ ಮಂಜಭಟ್ಟರ ಸೊಸೆಯನ್ನು ಬಿಟ್ಟು ಅವರ ಮಗ, ಕಿಟ್ಟ ಐತಾಳ ಹೆಂಡತಿಯನ್ನು ಇಟ್ಟುಕೊಂಡಿದ್ದು, ಗೌಡರ ಜೀತದಾಳುಗಳು ಅವರ ಕಣ್ಣುತಪ್ಪಿಸಿ ಬೇರೆ ತೋಟದ ಜೀತದಾಳುಗಳನ್ನು ಮದುವೆಯಾಗುವುದಿರಲಿ –ಪ್ರೀತಿಸಲೂ ಆಗದಿರುವುದು ಇತ್ಯಾದಿಗಳಲ್ಲಿ ಲೈಂಗಿಕತೆಯ ವಿವಿಧ ಸ್ತರಗಳು ಸಾಂಸ್ಕೃತಿಕ ಮತ್ತು ಸಾಮಾಜಿಕ ನಿಯಂತ್ರಣಗಳಿಗೆ ಒಳಪಟ್ಟು ಬಹಳ ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಒಂದು ಮಟ್ಟದಲ್ಲಿ ಕೆಳಜಾತಿಯ, ಕೆಳವರ್ಗದ ಲೈಂಗಿಕತೆಯು ಜಮೀನ್ದಾರರ ಬಲಾಬಲಕ್ಕೆ ಅಧೀನವಾಗಿರುತ್ತದೆ. ಅವರ ಒಪ್ಪಿಗೆ ಇಲ್ಲದೆ ಕೆಳವರ್ಗದ ಜನರು ಮದುವೆಯಾಗುವುದಿರಲಿ, ಪ್ರೀತಿಸುವುದೂ ಸಾಧ್ಯವಿಲ್ಲ. ತಿಮ್ಮಿ ಮತ್ತು ಗುತ್ತಿ ಓಡಿಹೋದಾಗ ತಿಮ್ಮಿಯ ಅಣ್ಣ ಸಣ್ಣಬೀರನನ್ನು ಕಂಬಕ್ಕೆ ಕಟ್ಟಿ ಹೊಡೆದು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳುವ ಜಮೀನ್ದಾರಿಕೆಯ ಬಲವು ಲೈಂಗಿಕತೆಯ ಸ್ಥರವನ್ನು ಸೃಷ್ಟಿಸಿಕೊಳ್ಳಲು ಪಡುವ ಪ್ರಯತ್ನ. ಸಣ್ಣಬೀರನ ಅವ್ವನ ಪ್ರಾಕೃತಿಕ ಸ್ಥೈರ್ಯದ ಎದುರು ಕುಸಿದು ಬೀಳುವುದು ಕಂಡುಬರುತ್ತದೆ. ಆದರೆ ಎಲ್ಲವನ್ನು ಮೀರಿ ನಿಂತಂತೆ ಕಂಡುಬರುವ ಚಿನ್ನಮ್ಮ ಮತ್ತು ಮುಕುಂದಯ್ಯರ ಪ್ರೇಮವು ಮೇಲೆ ಹೇಳಿದ ಎಲ್ಲ ರೀತಿಯ ಕಾಮಕ್ಕೆ ತದ್ವಿರುದ್ಧವಾಗಿದ್ದು– ಒಂದು ಆದರ್ಶವಾಗಿ ನಿಲ್ಲುತ್ತದೆ.

# ಅಧ್ಯಾಯ ೩

## ಕುವೆಂಪು ಕಾದಂಬರಿಗಳಲ್ಲಿ ಬೇಟೆ

### ಬೇಟೆ ಬೆಳೆದು ಬಂದ ದಾರಿ

ಆದಿ ಕಾಲದಿಂದಲೂ ಮಾನವ ಪ್ರಾಣಿಸದೃಶ ಜೀವನ ನಡೆಸಿಕೊಂಡು ಬರುತ್ತಿದ್ದ. ಆರಂಭದಲ್ಲಿ ಗೆಡ್ಡೆ, ಗೆಣಸು, ಸಿಕ್ಕ ಸಿಕ್ಕ ಸೊಪ್ಪು, ಹಣ್ಣು, ಕಾಯಿಗಳನ್ನು ತಿನ್ನುತ್ತಿದ್ದ. ಆಹಾರಕ್ಕಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ವಲಸೆ, ಅಲೆಮಾರಿ ಜೀವನ, ಮಾಡುತ್ತಿದ್ದ. ಅನಂತರ ಮಾಂಸದ ರುಚಿಗೆ ಬಲಿಬಿದ್ದ. ಮಾನವ ಬೇಟೆಗೆ ಆರಂಭಿಸಿದ. ಇಡೀ ಪ್ರಕೃತಿಗೆ ಸಾರ್ವಭೌಮನಂತೆ ನಡೆದುಕೊಂಡ. ಪ್ರಕೃತಿಯಲ್ಲಿದ್ದ ಪ್ರಾಣಿ ಪಕ್ಷಿಗಳು, ಉರಗಗಳು, ಕೋಳಿ, ಮೊಲ, ಕಾಡೆಮ್ಮೆ, ಹುಲಿ ಸಿಂಹಗಳಂತಹ ಪ್ರಾಣಿಗಳನ್ನು ಬೇಟೆಯಾಡಲು ಆರಂಭಿಸಿದ. ಕಾಲಕ್ರಮೇಣ ಜೀವನದಲ್ಲಿ ಇದೊಂದು ವೃತ್ತಿ, ಪ್ರವೃತ್ತಿ ಮನರಂಜನಾ ವಿಶೇಷವಾಗಿ ಬೆಳೆದು ಬಂತು. ಇದಕ್ಕೆ ಪೂರಕವಾಗಿ ಅನೇಕ ವೃತ್ತಿಗಳೂ ಹುಟ್ಟಿಕೊಂಡವು.

ಈ ವೃತ್ತಿಗಳು ವಿವಿಧ ಆಕಾರಗಳನ್ನು ರೂಪಗಳನ್ನು ಪಡೆದುಕೊಂಡವು. ಅನಂತರ ಮಾನವ ತನ್ನದೇ ಆದ ತಾಂತ್ರಿಕತೆ, ಶಾಸ್ತ್ರ, ಪ್ರಕೃತಿ ಇತ್ಯಾದಿಗಳ ಬಗ್ಗೆ ಅರಿವು ಬೆಳೆಸಿಕೊಂಡ. ಬೇಟೆಗೆ ಬೇಕಾಗುವ ಸಲಕರಣೆಗಳಾದ ಬಲೆ, ಗಾಳ, ಕೂಳಿ, ಬಳಸಿಕೊಂಡು ಸುಲಭವಾಗಿ ಅಪಾಯವಿಲ್ಲದೆ ಬೇಟೆಯಾಡುವುದನ್ನು ಕಲಿತ. ವಿದ್ಯಾವಂತರೂ ಕೂಡ ಅದರ ಬಲೆಗೆ ಬೀಳುವ ಮಿಗವಾಗಿದ್ದರು ಮುಂದೆ ನಾಯಿಗಳನ್ನೂ ತನ್ನ ಬೇಟೆಗೆ ಬಳಸಿಕೊಳ್ಳಲು ಆರಂಭಿಸಿದರು. ನರಿ, ಜಿಂಕೆ, ಮೊಲ, ಸೋರೆಹಕ್ಕಿ, ಹಂದಿಗಳ ಬೇಟೆ ಸರ್ವೇಸಾಮಾನ್ಯವಾಯಿತು.

### ಬೇಟೆಗಾರನ ಅರ್ಹತೆಗಳು :

ಬೇಟೆಗಾರನಿಗೆ ಮುಖ್ಯವಾಗಿ ಸೂಕ್ಷ್ಮತೆ, ಕೌಶಲ್ಯ, ಶಕ್ತಿ, ಚಾತುರ್ಯ, ದೃಷ್ಟಿ ಸಾಮರ್ಥ್ಯ, ಶ್ರವಣ ಶಕ್ತಿ, ಧೈರ್ಯ, ಸಹನೆ, ತಾಳ್ಮೆಗಳು ಬೇಕಾಗುತ್ತದೆ. ಇದರ ಜೊತೆಗೆ ಅವನಿಗೆ ಬೇಕಾದ ಆಯುಧಗಳನ್ನು ಅವನೇ ಸಿದ್ಧಪಡಿಸಿಕೊಳ್ಳುವ, ರಿಪೇರಿ ಮಾಡಿಕೊಳ್ಳುವ ಚಾಕಚಕ್ಯತೆ, ಕೂಡ ಬೇಕಾಗುತ್ತದೆ. ಕುವೆಂಪು ಕಾದಂಬರಿಗಳಲ್ಲಿ ಇಂಥ ಬೇಟೆಯ ಪ್ರಸಂಗಗಳು ಕಾಣಸಿಗುತ್ತವೆ.

ಕಾನೂರು ಹೆಗ್ಗಡಿತಿಯಲ್ಲಿ ಹೂವಯ್ಯ ರಾಮಯ್ಯರು ಪರೀಕ್ಷೆ ಮುಗಿಸಿ ಕಾನೂರಿಗೆ ಬರುತ್ತಿರುವ ಸುದ್ದಿ ಕೇಳಿ ಚಿನ್ನಯ್ಯ ಮೀನಿನ ಬೇಟೆಗೆ ತನ್ನ ಕೋವಿ ತೆಗೆದುಕೊಂಡು ಹೋಗುತ್ತಾನೆ. ನೀರು ನುಂಗಲು ಬಂದ ಮೀನಿಗೆ ಗುರಿ ಇಟ್ಟು ಹೊಡೆದಾಗ ಅದು ಕೆಸರಲ್ಲಿ ಹೂತು ಹೋಗುತ್ತದೆ. ಕೆರೆಯನ್ನೆಲ್ಲಾ ಜಾಲಾಡಿ ಹುಡುಕಿದ ನಂಜ "ಹೋ ಇಲ್ಲಿ ಬಿದ್ದವಳೆ ಲೌಡಿ!" (ಕಾ.ಹೆ.ಪು ೨೬) ಎನ್ನುತ್ತಾ ನಂಜನು ನೀರಲ್ಲಿ ಮುಳುಗಿ ಕಣ್ಮರೆಯಾಗುತ್ತಾನೆ. ಇಲ್ಲಿನ ಜನರಿಗೆ ವಿಶೇಷ ಭೋಜನ ಖರ್ಚಿಲ್ಲದೆ ಪ್ರಕೃತಿಯಲ್ಲೆ ಮೀನಿನ ಮುಖಾಂತರ ದೊರೆಯುತ್ತಿತ್ತು ಹಾಗೂ ನೆಂಟರಿಗೆ ಭಾರೀ ಔತಣವಾಗುತ್ತಿತ್ತು.

ಮೀನು ಹಿಡಿಯಲು ಕೂಳಿ, ಬಲೆ, ಒಡ್ಡು, ಹೀಗೆ ಅನೇಕ ವಿಧದ ಆಯುಧಗಳನ್ನು ಬಳಸುತ್ತಾರೆ. ಅವರು ಹರಿವ ನೀರಿಗೆ ಕೂಳಿ ಒಡ್ಡುವ ಹಂತದಿಂದ ಬಲೆಯನ್ನು ಬಳಸಿ ಮೀನು ಹಿಡಿಯುವ ಹಂತಕ್ಕೆ ಹೋಗುತ್ತಾರೆ. ಅನಂತರದ ಹಂತದಲ್ಲಿ ಕೋವಿಯನ್ನು ಬಳಸಿ ಮೀನು ಬೇಟೆ ಮಾಡುವುದು ಪ್ರಾರಂಭವಾಗುತ್ತದೆ. ಹೀಗೆ ಮೀನಿನ ಬೇಟೆಯಲ್ಲೂ ಹಂತ ಹಂತಗಳ ಮಾರ್ಪಾಟು ಅಸ್ತಿತ್ವಕ್ಕೆ ಬಂದುದು ಗೋಚರವಾಗುತ್ತದೆ.

**ಕಾಡುಕೋಳಿ ಬೇಟೆ :**

'ಕಾಡು ಹುಂಜವೊಂದು ತನ್ನ ಜೊತೆ ಕಾಡು ಹೇಂಟೆ ಇದ್ದರೂ ಬೇರೊಂದು ಕಾಡು ಹೇಂಟೆಯ ಧ್ವನಿಗೆ ಮರುಳಾಗಿ ಅತ್ತಕಡೆ ಹೊರಳುತ್ತದೆ. ಅದನ್ನೇ ಕಾಯುತ್ತಿದ್ದ ಸೇರೆಗಾರ ರಂಗಪ್ಪ ಸೆಟ್ಟರು ಕೇಪಿನ ಕೋವಿಯನ್ನು ಪ್ರಯೋಗಿಸುತ್ತಾರೆ. ಹುಂಜಕ್ಕೆ ತಾಗಿದ್ದ ಗುಂಡಿನಿಂದ ರಕ್ತ ಸೋರಿ ಮೂರ್ಛೆ ಹೋಗುತ್ತದೆ. ಕೋಳಿ ಸತ್ತಿದೆ ಎಂದು ತಿಳಿದು ಅದನ್ನು ತಂದು ಪಕ್ಕದಲ್ಲಿಟ್ಟು ಸಂತೋಷದಿಂದ ಈಡು ತುಂಬುತ್ತಾರೆ. ಮೂರ್ಛೆ ಹೋಗಿದ್ದ ಹುಂಜ ಸ್ವಲ್ಪ ಎಚ್ಚೆತ್ತು ಅತ್ತ ಇತ್ತ ಹೊರಳಿ ವಕ್ರ ವಕ್ರವಾಗಿ ನಡೆದು ಓಡಿ ಹೋಗಿ ದಟ್ಟ ಪೊದೆಯಲ್ಲಿ ಸೇರಿಕೊಳ್ಳುತ್ತದೆ. ಸೇರೆಗಾರರು ಎಷ್ಟು ಕಷ್ಟಪಟ್ಟು ಹಿಂದೆ ಹಿಂದೆ ಓಡಿದರೂ ಹಿಡಿಯಲಾಗದೇ ನಿಸ್ಸಹಾಯಕರಾಗುತ್ತಾರೆ.'

ಬೇಟೆಯಲ್ಲಿ ತಾತ್ಸಾರ, ಸೋಮಾರಿತನ, ಒಳಿತಲ್ಲ. ಎಷ್ಟು ಸೂಕ್ಷ್ಮವಾಗಿರುತ್ತಾರೋ ಅಷ್ಟೂ ಒಳ್ಳೆಯದು. ಯಾವ ಕಾರಣಕ್ಕೂ ಎದುರಾಳಿಯ ಶಕ್ತಿ ಸಾಮರ್ಥ್ಯದ ಬಗ್ಗೆ ಉದಾಸೀನ ತಾಳುವುದು ಒಳಿತಲ್ಲ. ರಂಗಪ್ಪ ಸೆಟ್ಟರ ಉದಾಸೀನ ಹಾಗೂ ಅಲ್ಪತೃಪ್ತಿತನವೇ ಹುಂಜ ಓಡಲು ಕಾರಣವಾಗುತ್ತದೆ. ದೇ ಜ. ಗೌಡರ (ಕು.ದ. ಸಂ. ೩) ಅಭಿಪ್ರಾಯದಂತೆ ಸೇರೆಗಾರರಿಗೆ ಮಂಕುಬೂದಿ ಎರಚಿ ಕೋಳಿ ಅವರಿಂದ ತಪ್ಪಿಸಿಕೊಂಡು ಹೋದದ್ದು

ಅವರ ಅವಿವೇಕಕ್ಕೆ ಸಾಕ್ಷಿಯಾಗಿ ಹಾಸ್ಯದ ಹೊನಲನ್ನು ಉಕ್ಕಿಸುತ್ತದೆ. ಇದು ಸೇರೆಗಾರರ ಅನನುಭವಿ ಬೇಟೆಗಾರಿಕೆಯ ಪರಮಾವಧಿ ಎಂದು ಒಪ್ಪಿಕೊಳ್ಳಲೇ ಬೇಕು. ಬಹುಶಃ ಘಟ್ಟದ ಮೇಲಿನವರಂತೆ ಸೇರೆಗಾರರು ಬೇಟೆಯಲ್ಲಿ ಪಳಗಿದವರಲ್ಲ ಎಂಬುದು ಇದರಿಂದ ತಿಳಿಯುತ್ತದೆ.

**ಕಾಡುಹಂದಿ ಬೇಟೆ:** ಕಾನೂರು ಹೆಗ್ಗಡತಿ ಕಾದಂಬರಿಯ ಕತ್ತಲೆಗಿರಿಯ ಸರವಿನ ದೃಶ್ಯದಲ್ಲಿ ಪುಟ್ಟಣ್ಣ ತೋರಿದ ಹಂದಿಬೇಟೆಯ ಸಾಹಸ ಅಸಾಮಾನ್ಯವಾಗಿತ್ತು. ಅವನ ಮೈ ಮೇಲೆ ಹಂದಿಕೋರೆಯ ಗುರುತುಗಳು ನಾಲ್ಕೈದಕ್ಕಿಂತ ಹೆಚ್ಚಾಗಿಯೇ ಇದ್ದವು. ಎಷ್ಟೋ ರಾತ್ರಿಗಳನ್ನು ಪುಟ್ಟಣ್ಣ ಕಾಡಿನ ನೆಲದಲ್ಲೇ ಕಳೆದಿದ್ದ.

ಒಮ್ಮೆ ಬೇಟೆಗೆ ಹೋದಾಗ ಪುಟ್ಟಣ್ಣ ಹೊಡೆದ ಈಡು ತಾಗಿದ ಹಂದಿ ಅರೆಪ್ರಜ್ಞಾವ್ಯವಸ್ಥೆಯಲ್ಲೆ ಮಲಗಿತ್ತು. ಜಾಕಿ ಅದರ ಮೇಲೆ ಕಂಬಳಿ ಹಾಕಿ ಮೇಲೆ ಕುಳಿತುಕೊಳ್ಳುತ್ತಾನೆ. ಪುಟ್ಟಣ್ಣ ಅನ್ವೇಷಣೆ ಮಾಡಿ ಈಡಿನ ಜಾಡು ಹುಡುಕಿ ಬಂದಾಗ ರಕ್ತ ಸೋರಿದ್ದನ್ನು ಜಾಕಿಗೆ ತೋರಿಸುತ್ತಾನೆ. ಮಾತಿಗೆ ಮಾತು ಬೆಳೆದು ಜಾಕಿ ಹಂದಿ ಬಿಟ್ಟು ಮೇಲೇಳುತ್ತಾನೆ. ತಕ್ಷಣ ಅಲ್ಲೇ ಇದ್ದ ನಾಯಿಗಳು ಹಂದಿ ಮೇಲೆ ಹರಿಹಾಯ್ದು ಹಂದಿಯ ಇರವನ್ನು ತೋರಿಸುತ್ತವೆ. ತಾವು ಹೊಡೆದ ಬೇಟೆಯನ್ನು ಉಳಿಸಿಕೊಳ್ಳುವುದೂ ಸಾಮರ್ಥ್ಯವೇ. ಬೇಟೆಗಾರರಿಗೆ ಧೈರ್ಯ ಅಗತ್ಯ. ತನ್ನತನವನ್ನು ಉಳಿಸಿಕೊಳ್ಳಲು ಅಷ್ಟೆಲ್ಲಾ ಪ್ರಯತ್ನಪಡಬೇಕು. ಅತ್ಯುತ್ತಮ ಬೇಟೆಗಾರ ತಾನು ಹೊಡೆದ ಬೇಟೆಯನ್ನು ಉಳಿಸಿಕೊಳ್ಳುವುದಕ್ಕೂ ತಿಳಿದಿರಬೇಕು.

**ಕಣೆಹಂದಿ ಬೇಟೆ :** ಕಾ.ಹೆ. ಕಾದಂಬರಿಯ 'ಭೂಮಿ ಹುಣ್ಣಿಮೆ' ಅಂಕದಲ್ಲಿ ಭೂಮಿ ಹುಣ್ಣಿಮೆ ಹಬ್ಬದ ಹಿಂದಿನ ದಿನ ಹೂವಯ್ಯ, ರಾಮಯ್ಯ, ವಾಸು, ಪುಟ್ಟಣ್ಣ, ಬೈರ ಸಿದ್ಧ ಈ ಬೇಟೆಗೆ ಹೋದ ಸಂದರ್ಭದಲ್ಲಿ ಮೊದಲ ಈಡು ರಾಮಯ್ಯನದಾದರೂ ಮರು ಈಡು ಹೂವಯ್ಯನದಾಗಿತ್ತು. ಆದರೆ ಇಬ್ಬರಲ್ಲಿ ಯಾರ ಗುಂಡಿಗೆ ಆ ಕಣೆ ಹಂದಿ ಬಿತ್ತು ಎಂದು ಇಬ್ಬರಿಗೂ ಗೊತ್ತಿಲ್ಲ. ತಮ್ಮ ಗುಂಡಿಗೆ ಹಂದಿ ಬಿದ್ದಿದೆ ಎಂದು ಇಬ್ಬರ ವಾದ. ಎಂದಿಗೂ ಜಗಳವಾಡದ ರಾಮಯ್ಯ, ಹೂವಯ್ಯ ಅಂದು ಜಗಳವಾಡುತ್ತಾರೆ. ಇಂದ್ರಕೀಲ ಪರ್ವತದಲ್ಲಿ ಕಿರಾತ ಹಾಗೂ ಅರ್ಜುನ ಹಂದಿಯನ್ನು ಹೊಡೆದು ಹಕ್ಕು ಸ್ಥಾಪನೆಗೆ ಪ್ರಯತ್ನಿಸುವ ರೀತಿಯ ಪ್ರಯತ್ನವಿದು. ಬೇಟೆ ಹೊಡೆದವರು ತಮ್ಮ ಹಕ್ಕನ್ನು ಸ್ಥಾಪಿಸುವುದು ಮುಖ್ಯವಾಗಿತ್ತು.

ಮ.ಮ. ಕಾದಂಬರಿಯಲ್ಲಿ ಮುಕುಂದಯ್ಯ ಒಂಟಿ ಹಂದಿಯನ್ನು ಹುಲಿಯನ (ಗುತ್ತಿಯ ನಾಯಿ) ಸಹಾಯದಿಂದ, ಹಾಗೂ ಬಿಲ್ಲಿಗೆ ಸರಿಯಾಗಿ ಸೋವಿ ಎಬ್ಬಿದುದರಿಂದ ಗುಂಡು ಹೊಡೆಯುತ್ತಾನೆ. ಆದರೂ ಅದು ತಪ್ಪಿಸಿಕೊಂಡು ಹಸಲವರು ಮಿಣಿಬಲೆ ಒಡ್ಡಿದ್ದ ಕಂಡಿಗೆ ಸಿಕ್ಕಿ ಬೀಳುತ್ತದೆ. ಆ ದಡಿಗ ಬಲೆಗೆ ಬೀಳುವ ಮುನ್ನವೇ ಹುಲಿಯ ಆಕ್ರಮಣ ಮಾಡಿದರೂ ಅದರಿಂದ ತಪ್ಪಿಸಿಕೊಂಡು ನೋವು ಅನುಭವಿಸಬೇಕಾಯಿತು. ನಾಯಿ ಮತ್ತು ಬೇಟೆಗಾರರ ಭರ್ಚಿಗಳೂ ಹಂದಿ ಬೇಟೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಮಿಣಿಬಲೆ, ದಡಿಗಬಲೆಗಳು ಹಂದಿ ಹಿಡಿಯುವ ಸಾಧನಗಳು. ಅದರ ಆವಶ್ಯಕತೆ, ಬಳಕೆಯ ಮಿತಿಗಳ ಪರಿಚಯ ಈ ಭಾಗದಲ್ಲಿ ನಮಗೆ ಆಗುತ್ತದೆ.

**ಜೇನುಬೇಟೆ :**

ಮಲೆನಾಡಿನ ಬೇಟೆಗಳಲ್ಲಿ ಪ್ರಸಿದ್ಧವಾದದ್ದು ಜೇನುಬೇಟೆ. ಆಬಾಲವೃದ್ಧರಾಗಿ ಎಲ್ಲರೂ ಇಷ್ಟಪಡುವ ಆರೋಗ್ಯಕರ ಬೇಟೆ. ಸಾಮಾನ್ಯವಾಗಿ ಚಿಕ್ಕ ಹುಡುಗರು ದನ ಕಾಯುವ ಸಂದರ್ಭದಲ್ಲಿ ಕಾಡಿಗೆ ಹೋಗಿ ಪ್ರತಿ ಗಿಡವನ್ನೂ ಹುಡುಕಿ ತಮ್ಮದೇ ಆದ ವಿಧಾನದಲ್ಲಿ ಜೇನು ತೆಗೆಯುತ್ತಾರೆ. 1) ತುಳಸೀ ಸೊಪ್ಪನ್ನು ಬಾಯಲ್ಲಿ ಅಗಿದು ಜೇನುಗೂಡಿನ ಮೇಲೆ ಉಗಿದು ಗೂಡಿಗೆ ಕೈಹಾಕಿ ಜೇನು ತೆಗೆಯುವುದು ಒಂದು ಮಾರ್ಗವಾದರೆ 2) ಬೆಂಕಿ ಹೊಗೆ ಹಾಕಿ ಹುಳುಗಳು ಹಾರಿಹೋದ ಮೇಲೆ ಜೇನು ತೆಗೆಯುವುದು ಎರಡನೇ ವಿಧಾನ. ಇವು ಸಾಮಾನ್ಯವಾಗಿ ರೂಢಿಯಲ್ಲಿರುವುದು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವಂತೆ ಪೀಂಚಲು ಎಲೆ ಮದ್ದು ಹಾಕಿ ಅದರ ಮೂಲಕ ಜೇನು ಹಿಡಿಯುತ್ತಾಳೆ. ಜೇನು ಹಿಡಿಯುವಲ್ಲಿ ಆಕೆ ನಿಪುಣೆ. ಬಹುಶಃ ಅಲ್ಲಿ ಬಳಸುವ ಎಲೆಮದ್ದು ತುಳಸೀರಸವೇ ಇರಬೇಕು. ತೇಜಸ್ವಿಯವರ ಕರ್ವಾಲೊ ಕಾದಂಬರಿಯಲ್ಲಿ ಜೇನು ಕೃಷಿ ಬಗ್ಗೆ, ಜೇನು ಸಂಗ್ರಹಣೆ ಬಗ್ಗೆ, ಜೇನು ಹಿಡಿಯುವ ಬಗ್ಗೆ ಅನೇಕ ಮಾಹಿತಿಗಳು ದೊರೆಯುತ್ತವೆ. ಮಲೆನಾಡಿನಲ್ಲಿ ಈಗಲೂ ಜೇನುಹಿಡಿದು ಮಾರಾಟಮಾಡುವ ಸನ್ನಿವೇಶಗಳನ್ನು ಕಾಣಬಹುದು.

**ಹುಲಿ ಬೇಟೆ :**

ಸಾಮಾನ್ಯ ಜನ ಏಡಿ, ಹಕ್ಕಿ, ಜೇನು ಬೇಟೆಯಲ್ಲಿ ಸಿದ್ಧಹಸ್ತರಾದರೆ ಗಂಡೆದೆಯ ವೀರರು ಧೈರ್ಯವಂತರು ಹುಲಿಬೇಟೆಯ ಸಾಹಸಕ್ಕೆ ಕೈಹಾಕುತ್ತಾರೆ. ಟಿಪ್ಪು, ಸಳರಂತಹ ವೀರರು ಹುಲಿಬೇಟೆಯಾಡಿ ನಾಡಿಗೆ ಕೀರ್ತಿತಂದುಕೊಟ್ಟರು. ಅವರ ಹೆಸರು ಅಮರವಾಗಿದೆ.

ಇಂಥ ಹುಲಿ ಬೇಟೆಗೆ ಮಲೆನಾಡಿನ ಬೇಟೆಗಾರರು ಅಭಿಮಾನದಿಂದ ಹೋಗುತ್ತಿದ್ದರು. ಅಂಥ ಧೈರ್ಯವಂತರಲ್ಲಿ ಮ.ಮ. ಕಾದಂಬರಿಯ ದೊಡ್ಡಣ್ಣ ಕಾ.ಹೆ.ಯ ಕೃಷ್ಣಪ್ಪ ಪ್ರಮುಖವಾಗಿ ಕಾಣುತ್ತಾರೆ.

ದೊಡ್ಡಣ್ಣ ಕಾಡಿನಲ್ಲಿದ್ದ ಹುಲಿಮರಿಗಳನ್ನು ಎತ್ತಿಕೊಂಡು ಮನೆಗೆ ತರುವಾಗ ಹಿಂದಿನಿಂದ ಅಟ್ಟಿಸಿಕೊಂಡು ಬಂದ ಹುಲಿ ಗುಂಡೇಟು ಬಿದ್ದರೂ ಓಡದೆ ತನ್ನ ಮರಿಗಳನ್ನು ರಕ್ಷಿಸಲು ಬಂದು ದೊಡ್ಡಣ್ಣನ ಮೇಲೆ ಎಗರಿ ಗಿಬಿರಿದ ಗುರುತು ಬೆನ್ನಮೇಲೆ ಕಾಣಿಸುತ್ತದೆ. ಹುಲಿ ಮರಿಯನ್ನು ಮನೆಯಲ್ಲೇ ಸಾಕುವ ಧೈರ್ಯ ಎಷ್ಟು ಜನಕ್ಕೆ ಇರುತ್ತದೆ. ಮಲೆನಾಡಿನ ಈ ಬೇಟೆಗಾರರು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದ ದೃಶ್ಯವನ್ನು ಹತ್ತಿರದಿಂದ ಕಂಡ ಕುವೆಂಪುರವರಿಗೆ ಮಾತ್ರ ಹೀಗೆ ಚಿತ್ರಿಸಲು ಸಾಧ್ಯ.

ಕಾನೂರು ಹೆಗ್ಗಡಿತಿಯ ಕೃಷ್ಣಪ್ಪ ಮೊಂಡುಧೈರ್ಯಮಾಡಿ ಸಮಾಜದ ದೃಷ್ಟಿಯಲ್ಲಿ ಒಳ್ಳೆಯ ಹೆಸರುಗಳಿಸಬೇಕೆಂಬ ಹುಮ್ಮಸ್ಸಿನಿಂದ, ಹಾಗೂ ಸೀತೆಯಂಥವಳಿಗೆ ಒಳ್ಳೆಯ ಗಂಡನಾಗಬೇಕು ಎಂಬ ಆಸೆಯಿಂದ ಬೇಟೆಗೆ ಹೋಗಿ ಹುಲಿ ಬಾಯಿಗೆ ಬಲಿಯಾಗಬೇಕಾಗುತ್ತದೆ.

ಮಲೆನಾಡಿನ ಪ್ರಕೃತಿಯಲ್ಲೆ ಹುಟ್ಟಿ ಬೆಳೆದ ಕುವೆಂಪು ಆ ಮಣ್ಣಿನ ವಾಸನೆಗೆ ಅನುಗುಣವಾದ ಸಹಜ ಬೇಟೆಗಳಾದ ಕಪ್ಪೆಗೋಲು, ಮಿಣಿಬಲೆ, ದಡಿಗ ಬಲೆ, ಹುರುಳು ಬಲೆ, ಇತ್ಯಾದಿಗಳನ್ನು ಬಳಸುವುದು, ಮರಸುಕೂರುವುದು, ಚಾಟುಬಿಲ್ಲು ಹಿಡಿದು ಬೇಟೆಯಾಡುವುದು ಮುಂತಾದುವನ್ನು ಬಲ್ಲವರಾಗಿದ್ದರು. ಅಲ್ಲಿನ ಜನರೂ ಪ್ರಕೃತಿಯ ಅವಿಭಾಜ್ಯ ಅಂಗವಾಗಿ ಬೇಟೆಯನ್ನು ರೂಢಿಸಿಕೊಂಡಿದ್ದರು.

ಮರಸು ಕೂತು ಬೇಟೆಯಾಡುವುದು ಮಲೆನಾಡಿನಲ್ಲಿ ಹುಲಿ, ಕಾಡುಹಂದಿಗಳನ್ನು ಬೇಟೆಯಾಡುವ ಸಂದರ್ಭದಲ್ಲಿ. ಎತ್ತರವಾದ ಅಟ್ಟಣಿಗೆ ಕಟ್ಟಿ ಅದರ ಮೇಲೆ ಕೂತು ಕಾಯ್ದಿದ್ದು ಪ್ರಾಣಿ ಬಂದಾಗ ಹೊಡೆಯುವ ವಿಧಾನ ಮಲೆನಾಡಿನಲ್ಲಿ ಅಂದಿಗೆ ಹೊಸ ವಿಷಯವಾಗಿತ್ತು. ಕಾಡು ಪ್ರಾಣಿಗಳಾದ ಹುಲಿ, ಹಂದಿ, ಕಡವೆಗಳನ್ನು ಕೋವಿಗಳಿಂದ ಹೊಡೆಯುತ್ತಿದ್ದರು.

ಮಲೆಗಳಲ್ಲಿ ಮದುಮಗಳುವಿನ ದೊಡ್ಡಣ್ಣ ಹೆಗ್ಗಡೆ ನವೀನ ರೀತಿಯ ಜೋಡಿನಳಿಕೆ ಕೋವಿಯನ್ನು ಬಳಸುತ್ತಾರೆ. ಮುಕುಂದಯ್ಯ ಕಾಡುಕೋಳಿ ಬೇಟೆಗೆ ಬಳಸುವ ಮಸಿ ತುಂಬಿದ ಕೋವಿಗಿಂತ ನವೀನ ರೀತಿಯ ಕೋವಿಯಾಗಿತ್ತದು.

# ಅಧ್ಯಾಯ ೪

## ಕ್ರೈಸ್ತರ ಆಗಮನ

### ಯಂತ್ರ ನಾಗರಿಕತೆ ಪ್ರವೇಶ

ಮನುಷ್ಯ ನಾಗರಿಕನಾದಂತೆ ಅವನ ಆಸೆ ಆಕಾಂಕ್ಷೆಗಳು ಜೀವನ ಶೈಲಿಯೂ ಬದಲಾವಣೆ ಹೊಂದುತ್ತದೆ. ಸೃಜನಶೀಲತೆಯ ಪರಿಣಾಮವಾಗಿ ಹೊಸ ಆವಿಷ್ಕಾರಗಳು ಉದ್ಭವವಾಗುತ್ತವೆ. ಆರಂಭದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಬೇಕಾದರೆ ನಡೆದೇ ಹೋಗಬೇಕಿತ್ತು, ಅಥವಾ ಪ್ರಾಣಿಗಳನ್ನು ಬಳಸಿಕೊಂಡು ಅವುಗಳ ಮೇಲೆ ಸವಾರಿ ಹೋಗಬೇಕಿತ್ತು. ಅದರ ಅನಂತರದ ಹೆಜ್ಜೆಯಾಗಿ ತಂತ್ರಜ್ಞಾನವನ್ನು ಬಳಸಿ ಬೈಸಿಕಲ್ ಕಂಡುಹಿಡಿಯಲಾಯಿತು.

ವಿದೇಶದಿಂದ ಭಾರತಕ್ಕೆ ಬಂದ ಪಾದ್ರಿಗಳು ಮಲೆನಾಡಿಗೆ ಬಂದ ಸಂದರ್ಭದಲ್ಲಿ ಬೈಸಿಕಲ್ ತರುತ್ತಾರೆ. ಗ್ರಾಮೀಣರ ಬಾಯಲ್ಲಿ ಇದು ಬೀಸೆಕಲ್ಲು ಆಯಿತು. ಈ ಜನ ನೋಡಿದ್ದು ಬೀಸುವ ಕಲ್ಲು, ಬೀಸುವ ಕಲ್ಲಿಗೆ ಒಂದರ ಮೇಲೆ ಒಂದು ಚಕ್ರ ಇರುವುದನ್ನು ನೋಡಿದ ಜನಕ್ಕೆ ಬೈಸಿಕಲ್ಲಿಗೆ ಒಂದರ ಹಿಂದೆ ಇನ್ನೊಂದು ಚಕ್ರ ಇರುವುದು ನೋಡಿ ಆಶ್ಚರ್ಯ. ಎತ್ತಿನಗಾಡಿಗೆ ಒಂದರ ಪಕ್ಕದಲ್ಲಿ ಇನ್ನೊಂದು ಚಕ್ರ ಇದ್ದುದನ್ನು ನೋಡಿರುತ್ತಾರೆ. ಇದು ಚಲಿಸುವ ತಾಂತ್ರಿಕತೆಯು ಅಚ್ಚರಿ ಉಂಟುಮಾಡುತ್ತದೆ.

"ಬೆಟ್ಟಳ್ಳಿ ಹಕ್ಕಲಾಗೆ ಇವತ್ತು ಬೈಗಿನಹೊತ್ತು ತೀರ್ಥಳ್ಳಿ ಕಿಲಸ್ತರ ಪಾದ್ರಿ ಅದೇನೋ ಬೀಸೆಕಲ್ಲು ಸವಾರಿ ಮಾಡ್ತಾರಂತೆ. ನಮ್ಮ ಬೆಟ್ಟಳ್ಳಿ ಸಣ್ಣಗೌಡ್ರಿಗೂ ಸವಾರಿ ಕಲಿಸ್ತಾರಂತೆ ಎಲ್ಲರೂ ಹೊಗ್ತಿದ್ದಾರೆ. ಅದನ್ನೋಡಾಕೆ" (ಮ.ಮ.ಪು೧೦೭) ಇಲ್ಲಿ ಬೈಸಿಕಲ್‌ನ್ನೇ ನೋಡದ ಜನ ಅದು ಚಲಿಸುವ ರೀತಿಯನ್ನು ನೋಡಲೆಂದು ಒಟ್ಟಾರೆಯಾಗಿ ಅದರ ಮಜಾ ಪಡೆಯಲೆಂದು ಹೋಗುತ್ತಾರೆ. ಅದೊಂದು ಅದ್ಭುತ. ಹೊಸ ವಿಷಯ. ಮಲೆನಾಡಿನ ಜನಕ್ಕೆ ನಾಗರಿಕತೆ ಒಮ್ಮೆ ಬಂದ ಮೇಲೆ ಅದಕ್ಕೆ ತಕ್ಕಂತೆ ನಾವು ಬದಲಾಗಲೇಬೇಕು. ಎಂಬ ಅಭಿಪ್ರಾಯ ಮೂಡಿಸುವ ಘಟನೆಯಿದು. ಅನಂತಮೂರ್ತಿಯವರ ಸಣ್ಣ ಕಥೆ 'ತುಕ್ಕೋಜಿ'ಯಲ್ಲಿ ಊರಿಗೆ ರಸ್ತೆ ಬಂದಾಗ ಶಾಲೆ ಕಾಲೇಜು ಬರುವುದು. ಕಾಲೇಜು ವಿದ್ಯಾರ್ಥಿಗಳು ಟೈಲರ್ ಹತ್ತಿರ ಬರುವುದು. ಕ್ಷೌರದ ಅಂಗಡಿಗಳು ಪ್ರವೇಶ. ರೋಲರ್‌ನ ಡ್ರೈವರ್ ಯಶೋದಳ ಮಗುವನ್ನು ಎತ್ತಿಕೊಂಡು ಹೋಗಿ ತುಂಬಾ ಸಮಯವಾದರೂ ಬರದಿದ್ದಾಗ ಆಕೆ ಆತಂಕ, ಕಳವಳ ಪಡುವುದು. ಹೀಗೆ ಆ ಊರಿನ ಜನ ಏನೆಲ್ಲ ಹೊಸ

ಅವಾಂತರಗಳಿಗೆ ಸಿಕ್ಕಿಕೊಳ್ಳುತ್ತಾರೆ ಇತ್ಯಾದಿಗಳನ್ನು ವಿಶದಪಡಿಸುತ್ತಾರೆ. ಅದೇ ರೀತಿ ಇಲ್ಲಿ ಸುಬ್ಬಣ್ಣ ಹೆಗ್ಗಡೆಯವರು "ಅಂತೂ ಆ ಪಾದ್ರಿಯಿಂದ ಸುಖ ಇಲ್ಲ ಅಂತಾ ಕಾಣ್ತದೆ. ಬೀಸೆಕಲ್ಲು ಸವಾರಿ, ಹೊಗೆಬತ್ತಿ ಸೇದೋದು, ಮುಂಜುಟ್ಟು ಬಿಡೋದು, ಇನ್ನೂ ಏನೇನೋ ಯಕ್ಷಿಣಿಮಾಡಿ, ಜಾತಿ ಕೆಡಿಸಿ, ಕಿಲಸ್ತರ ಮತಕ್ಕೆ ಸೇರಿಸಕ್ಕೆ ಹುನ್ನಾರು ಮಾಡ್ತಿದಾನೆ. ನಿನ್ನ ಬೆಟ್ಟಳ್ಳಿ ಸಣ್ಣಗೌಡರೂ ಅವನ ಬಲೆಗೆ ಬೀಳೋ ಹಂಗೆ ಕಾಣ್ತದೆ" ಎಂದು ನುಡಿಯುತ್ತಾರೆ. ಇಲ್ಲಿ ನಾಗರಿಕತೆಯು ಹಳ್ಳಿಗೆ ಪ್ರವೇಶ ಮಾಡಿದ್ದಷ್ಟೇ ಅಲ್ಲ; ಹಳ್ಳಿಯ ಪಾರಂಪರಿಕ ಸಂಸ್ಕಾರಗಳನ್ನೂ ಬಲಿತೆಗೆದು ಕೊಳ್ಳುತ್ತಲಿದೆ ಎಂಬ ಧ್ವನಿಯನ್ನು ಕಾದಂಬರಿಕಾರರು ವ್ಯಕ್ತ ಪಡಿಸುತ್ತಾರೆ. ಬೆಟ್ಟಳ್ಳಿ ಸಣ್ಣಗೌಡರ ಪ್ರಸ್ತಾಪ ಈ ಕಾರಣಕ್ಕಾಗಿಯೇ ಬಂದಿದೆ.

ಈ ಭೌತಿಕ ಬೈಸಿಕಲ್‌ನ್ನು ಮುಟ್ಟಿದಾಗ ಅನುಭವಗಳು ವಿಚಿತ್ರವೆನ್ನಿಸುತ್ತವೆ. ಟ್ರಂಗ್ ಟ್ರಣ್ ಶಬ್ದ. ಗುತ್ತಿ ಬೈಸಿಕಲ್‌ನ ಚಕ್ರವನ್ನು "ಕಾಳಿಂಗನ ಹಾವು ಸುತ್ತಿದ ಹಾಂಗಿದೆಯಲ್ಲಾ!" ಎಂದರೆ ಐತ "ನಾನೂ ಒಂದು ಚೂರು ಮುಟ್ಟಿ ನೋಡ್ತೀನೂ" ಎಂದು ಬೈಸಿಕಲ್‌ನ ನಾನಾ ಭಾಗಗಳನ್ನು ತಾನು ಮದುವೆಯಾದ ಮೊದಲಿನಲ್ಲಿ ಪೀಂಚಲುವಿನ ಕೋಮಲವಾದ ಅಂಗೋಪಾಂಗಗಳನ್ನು ಏಕಾಂತದಲ್ಲಿ ಸ್ಪರ್ಶಿಸಿ ಸುಖಿಸಿದಂತೆ ಮುಟ್ಟಿ ಮುಟ್ಟಿ ನೋಡಿ ತೃಪ್ತಿಯ ಅತಿಶಯಕ್ಕೆಂಬಂತೆ ನಿಟ್ಟಿಸಿರು ಬಿಡುತ್ತಾನೆ. ಇಲ್ಲಿ ಹೊಸತನದ ಅನುಭವ ಅದಕ್ಕೆ ಹೊಂದಿಕೊಳ್ಳುವ ರೂಪಕಗಳ ಮೂಲಕ ಬಿಂಬಿತವಾದದ್ದು ನವುರಾದ ಅನುಭವ ಕೊಡುತ್ತದೆ.

**ಬೈಸಿಕಲ್ ಕಲಿಯುವ ಬಗೆ :**

ಬೈಸಿಕಲ್ ಕಲಿಯಲು ದೇವಯ್ಯ ತೊಡಗಿದ ರೀತಿಯೇ ವಿಚಿತ್ರವಾಗಿದೆ. ಏಳೆಂಟುಮಾರು ಉದ್ದದ ಗಳುವನ್ನು ಬೈಸಿಕಲ್‌ನ ಹ್ಯಾಂಡಲ್‌ಗೆ ಜೋಡಿಸಿ ಬಳ್ಳಿಗಳಿಂದ ಬಿಗಿದು ಸುತ್ತುತ್ತಾರೆ. ಐದಾರು ಆಳುಗಳನ್ನು ಕರೆದು ನೊಗಕ್ಕೆ ಎತ್ತುಗಳನ್ನು ಕಟ್ಟುವಂತೆ, ಆಕಡೆ ಮೂವರು ಈ ಕಡೆ ಮೂವರನ್ನು ಕಟ್ಟಿ ದೇವಯ್ಯ ಅತ್ತಿತ್ತ ಅಲ್ಲಾಡದಂತೆ ಧೈರ್ಯವಾಗಿ ಹತ್ತಿ ಕುಳಿತುಕೊಳ್ಳುತ್ತಾನೆ. ಗಳು ಹಿಡಿದವರು ಬೈಸಿಕಲ್‌ನ್ನು ಎಳೆಯುತ್ತಾ ಹೋಗುತ್ತಾರೆ. ಗಳುವಿಗೆ ಭದ್ರವಾಗಿ ಕಟ್ಟಿದ್ದ ಹ್ಯಾಂಡಲ್ ತಿರುಗುವ ಸಂಭವವೇ ಇರಲಿಲ್ಲ. ಅದು ಗಳು ಹಿಡಿದವರ ವಶವಾಗಿ ಅವರು ಎಳೆದಷ್ಟೇ ವೇಗದಲ್ಲಿ ಅವರು ಎಳೆದತ್ತ ಹೋಗುತ್ತಿತ್ತು ವಿನಾ ದೇವಯ್ಯನ ವಶದಲ್ಲಿರಲಿಲ್ಲ. ಆದರೆ ಪಾದ್ರಿಗೆ ಗೊತ್ತಿತ್ತು. ಅದರ ಪ್ರಯೋಜನ ನಲಿಯುವಿಕೆಯಾಗಿತ್ತೆ ಹೊರತು ಕಲಿಯುವಿಕೆ ಆಗಿರಲಿಲ್ಲ. (ಪು...೧೬೫)

ದೇವಯ್ಯನಿಗೆ ಬೈಸಿಕಲ್ ಕಲಿಸುವ ಕೆಲಸವನ್ನು ಸ್ವತಃ ಪಾದ್ರಿಯೇ ಮಾಡುತ್ತಾನೆ. ದೇವಯ್ಯ ಬೈಸಿಕಲ್ ಹತ್ತಿದ್ದೆ ತಡ, ನಿಬ್ಬೆರಗಾಗಿ ಕಾಡಿಗೆ ಅಂಟಿ ನಿಂತಿದ್ದ ಜನಸಮೂಹ ಬೈಸಿಕಲ್ ನಿಂತೊಡನೆಯೇ ಯಾವುದೇ ಜಾತಿ, ಲಿಂಗ ಭೇದಭಾವವಿಲ್ಲದೆ ಒಬ್ಬರನ್ನೊಬ್ಬರು ತಳ್ಳಿಕೊಂಡು ನಾಲ್ಕು ದಿಕ್ಕಿನಿಂದಲೂ ಪಾದ್ರಿ ಹಿಡಿದಿದ್ದ ಬೈಸಿಕಲ್‌ನ ಕಡೆ ನುಗ್ಗುತ್ತದೆ. ಬೈಸಿಕಲ್‌ನ ಸ್ಪರ್ಷ ತಮ್ಮ ಪೂರ್ವಜನ್ಮದ ಪುಣ್ಯ ಎಂದುಕೊಳ್ಳುತ್ತಾರೆ. "ಮತ ಪ್ರಚಾರಕ್ಕೆ ಒದಗಿದ ಬೈಬಲ್ ಹಾಗೂ ಯೇಸುಕ್ರಿಸ್ತರಿಗಿಂತಲೂ ಬೈಸಿಕಲ್ ಹೆಚ್ಚು ಪ್ರಭಾವಶಾಲಿ" (ಕು. 90 ಶೂದ್ರ ಪು ೫೯) ಎಂಬುದಾಗಿ ಭಾವಿಸಲಾಗುತ್ತದೆ.

ಮುಂದೆ ಯುವಜನತೆಯನ್ನು ಕ್ರಮಿಸಿದ ಇತರ ಯಂತ್ರಗಳು ಆಧುನಿಕತೆಗೆ ಸುಲಭವಾಗಿ ತೆರೆದುಕೊಳ್ಳುತ್ತವೆ.

**ಧರ್ಮ ಪ್ರಚಾರ:**

ಧರ್ಮಪ್ರಚಾರ ಕ್ರೈಸ್ತರ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು. ಆದರೆ ಜೊತೆಗೆ ಮಲೆನಾಡಿಗರೆಲ್ಲ ಅನಾಗರಿಕರು, ಅವರನ್ನು ನಾಗರಿಕತೆಯ ಮಟ್ಟಕ್ಕೆ ಏರಿಸಬೇಕು. ಹಾಗೆ ಏರಿಸಬೇಕಾದರೆ ಅವರು ಕ್ರೈಸ್ತರಾಗಬೇಕು – ಎಂಬ ಅಭಿಪ್ರಾಯವೂ ಅವರಿಗಿತ್ತು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಪ್ರಪ್ರಥಮ ಬಾರಿಗೆ ದಿನಾಂಕ ಇಸವಿಗಳನ್ನು ಕುರಿತು ತಿಳಿಯ ಪಡಿಸುತ್ತಾರೆ. ಉದಾಹರಣೆಗೆ ೧೮೯೩ನೇ ಇಸವಿ ಸೆಪ್ಟಂಬರ್ ೧೧ನೆಯ ತೇದಿ ಸೋಮವಾರ (ಮ.ಮ. ೭೧೨ ಪು.) ಹಿಂದೂಗಳಿಗೆ ಮರೆಯಲಾರದ ದಿನ. ಹೀಗೆ ದಿನಾಂಕವನ್ನು ನೀಡುವುದರ ಮೂಲಕ ಕಾದಂಬರಿಗೆ ಚರಿತ್ರೆಯ ಹಿನ್ನೆಲೆಯೂ ಒದಗಿದಂತಾಗಿದೆ. ವಿವೇಕಾನಂದರು ಅಮೇರಿಕಾದ ಚಿಕಾಗೋದಲ್ಲಿ ಹಿಂದೂ ಧರ್ಮದ ಮಹತ್ವವನ್ನು ಸಾರಿದ ದಿನ. ಆದರೆ ಅಂದೇ ಪಾದ್ರಿ ಜೀವರತ್ನಯ್ಯ ಸಿಂಧುವಳ್ಳಿ ಚೆನ್ನಪ್ಪ ಗೌಡರ ಮನೆಗೆ ಪ್ರವೇಶಿಸಿ ಅವರನ್ನೂ ಮತಾಂತರಕ್ಕೆ ಒಳಗಾಗಿಸಿದ ದಿನ.

ಪಾದ್ರಿ ಜೀವರತ್ನಯ್ಯ ಯೇಸುವಿನ ಮತ್ತು ಕ್ರೈಸ್ತ ಮತದ ಪರೋಪಕಾರ ಪರಾನುಕಂಪನದ ನೀತಿ, ತ್ಯಾಗ, ಭಕ್ತಿ, ಉದ್ಧಾರಕ ಸಾಮರ್ಥ್ಯ ಇವುಗಳನ್ನು ಚೆನ್ನಪ್ಪ ಗೌಡರಿಗೆ ಪರಿಚಯಿಸುತ್ತಾನೆ. ಹಿಂದೂ ಧರ್ಮದ ಮಠಾಧೀಶರು ಮನುಧರ್ಮವನ್ನು ಹಾಗೂ ಅವರು ಕೈಗೊಳ್ಳುವ ಹೀನ ಕೃತ್ಯಗಳನ್ನು ಮನಮುಟ್ಟುವಂತೆ ತಿಳಿಸುತ್ತಾನೆ.

ಮತಾಂತರಕ್ಕೆ ಎಂಥವರನ್ನು ಆಯ್ಕೆ ಮಾಡಿಕೊಳ್ಳಬೇಕು ಎಂಬುದನ್ನು ಪಾದ್ರಿ ಜೀವರತ್ನಯ್ಯ ಚೆನ್ನಾಗಿ ಅರಿತಿದ್ದನು.

ವಸಾಹತುಶಾಹಿಯ ಪ್ರಾಬಲ್ಯ ದೇವಯ್ಯನನ್ನು ಮತಾಂತರಿಸಲು ಪೂರಕವಾಗುತ್ತದೆ. ತಮ್ಮದೇ ನಿಯಮಗಳನ್ನು ರೂಪಿಸಿ, ಶಿಫಾರಸ್ಸಿನ ಮುಖಾಂತರ ಸುಲಭವಾಗಿ ಮತಾಂತರಿಸಬಹುದು ಎಂಬ ನಂಬಿಕೆಯನ್ನು ಪಾದ್ರಿ ವ್ಯಕ್ತಪಡಿಸುತ್ತಾನೆ. ಬ್ರಿಟೀಷ್ ಚಕ್ರವರ್ತಿನಿಯೂ ಪ್ರೊಟೆಸ್ಟೆಂಟ್ ಕ್ರೈಸ್ತ ಮತದವಳೇ ಆದ್ದರಿಂದ ಇಂಡಿಯಾದಲ್ಲಿ ಬ್ರಿಟೀಷ್ ಸರಕಾರವು ಪ್ರೊಟೆಸ್ಟಂಟ್ ಮಿಷಿನರಿಗಳ ಏಳಿಗೆಗೆ ನೇಟಿವ್ ಜನರನ್ನು ಮತಾಂತರಿಸುವುದೇ ದಾರಿ ಎಂದು ಸರ್ವಾಧಿಕಾರವನ್ನೂ ಸರ್ವ ಸೌಲಭ್ಯವನ್ನೂ ಕೊಡುತ್ತಾ ಇದೆ. ಮೈಸೂರು ಸಂಸ್ಥಾನವು ನೇಟಿವ್ ಸಂಸ್ಥಾನವಾದರೂ ಅದರ ರಾಜನು ಸಂಪೂರ್ಣವಾಗಿ ಬ್ರಿಟೀಷರ ಅಡಿಯಾಳು. ಬ್ರಿಟೀಷರ ಪ್ರತಿನಿಧಿ ರೆಸಿಡೆಂಟ್ ಸಾಹೇಬರು ಹೇಳಿದ ಹಾಗೆ ಅವನು ಕೇಳಬೇಕಾಗುತ್ತದೆ. ಇಲ್ಲದಿದ್ದರೆ ರಾಜ್ಯವನ್ನೆ ಕಳೆದುಕೊಳ್ಳುತ್ತಾನೆ. "ನಮ್ಮ ದೊಡ್ಡ ಪಾದ್ರಿಗಳು ಲೇಕ್‌ಹಿಲ್ ದೊರೆಗಳು ರೆಸಿಡೆಂಟ್‌ನ ಕಿವಿಯಲ್ಲಿ ಒಂದು ಪಿಸುಮಾತು ಉಸಿರಿದರೆ ಸಾಕು, ನಿಮ್ಮ ಪಿತ್ರಾರ್ಜಿತ ಆಸ್ತಿಗೆ ನಿಮ್ಮ ಅರ್ಧಾಂಗಿ ಆಗುವ ನನ್ನ ಮಗಳು ಹಕ್ಕುದಾರಳಾಗಿ ಬಿಡುತ್ತಾಳೆ (ಮ.ಮ. ಪುಟ ೬೩೩) ಪಾದ್ರಿ ಜೀವರತ್ನಯ್ಯನವರ ಈ ಮಾತಿನ ಮೂಲಕ ತಿಳಿದುಬರುವ ವಿಚಾರಗಳು.

ವಸಾಹತುಶಾಹಿ ಆಡಳಿತದ ಹಿನ್ನೆಲೆಯಲ್ಲಿ ಈ ಮಾತನ್ನು ಯೋಚಿಸಬೇಕು ದೇವಯ್ಯನ ಸ್ವಂತ ಹೆಂಡತಿಯಾದ ದೇವಮ್ಮನಿಗೆ ಅನ್ಯಾಯವಾದರೂ ಚಿಂತೆ ಇಲ್ಲ; ತನ್ನ ಮಗಳಿಗೆ ಗಂಡ, ಆಸ್ತಿ ಎರಡೂ ಸಿಕ್ಕಿದರೆ ಸಾಕು ಎಂಬ ಉಪಾಯ ಇಲ್ಲಿ ಹುದುಗಿದೆ. ವಸಾಹತುಶಾಹಿಯ ಆಕ್ರಮಣ ಪ್ರವೃತ್ತಿ, ಲಾಭದ ದೃಷ್ಟಿ ಎರಡೂ ಇಲ್ಲಿ ವ್ಯಕ್ತವಾಗುತ್ತದೆ. ದೇವಯ್ಯನಿಗೆ ಕಾವೇರಿಯಂತಹ ಕನ್ಯೆಯರು ಈಗಾಗಲೇ ಬೇಕಾದಷ್ಟು ಜನ ಆಗಿ ಹೋಗಿದ್ದಾರೆ. ಆದರೆ ಮತಾಂತರ, ಅದೂ ಬಲವಂತವಾಗಿ ಆಗಬೇಕಾದ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಬೇಕಿತ್ತಷ್ಟೇ. ಕ್ರೈಸ್ತ ಮತದ ಆಕರ್ಷಣೆ ದೇವಯ್ಯನಿಗೆ ಇದ್ದೇ ಇತ್ತು. ಅವರು ಕೊಟ್ಟ 'ಆಧುನಿಕತೆ' ಎಂಬ ಆಭರಣವನ್ನು ಧರಿಸಿಯೂ ಆಗಿದೆ.

ದೇವಯ್ಯ ತೀರ್ಥಹಳ್ಳಿಗೆ ಹೋಗಿ ಬಂದಾಗಲೆಲ್ಲ ಏನಾದರೊಂದು ಬದಲಾವಣೆ ಹೊಂದಿಯೇ ಬರುತ್ತಿದ್ದನು. ಜೊತೆಗೆ ದೇವಮ್ಮನನ್ನು ಬದಲಾಯಿಸಲು ಪ್ರಯತ್ನಿಸುತ್ತಿದ್ದನು. "ನಿನ್ನ ಮುಂಗೈಗೆ ಹಚ್ಚೆ ಕುತ್ತಿಸಿಕೊಳ್ಳದಿದ್ದರೆ ಎಷ್ಟು ಚನ್ನಾಗಿ ಕಾಣ್ತಿತ್ತು" ಎಂದಾಗ "ಅದು ಶಿವನ ಜಡೆ. ಮುತ್ತೈದೆಗೆ ಕ್ಷೇಮ" ಎನ್ನುತ್ತಿದ್ದಳು. (ಮ.ಮ. ಪು.೨೧೭) ಆದರೆ 'ಕಾನೂರು ಹೆಗ್ಗಡಿತಿ'ಯ ಸೀತೆ ಹಚ್ಚೆ ಹಾಕಿಸಿಕೊಳ್ಳುವುದು ಅನಾಗರಿಕತೆ ಎಂದು ಹೇಳಿ ಹಚ್ಚೆ ಹಾಕಿಸಿಕೊಳ್ಳುವುದಿಲ್ಲ. ಏಕೆಂದರೆ ಸೀತೆ ಸುಶಿಕ್ಷಿತ ಹೆಣ್ಣು; ದೇವಯ್ಯ ತನ್ನ ಹೆಂಡತಿಯ

ಮೇಲೆ ಪ್ರಭಾವ ಬೀರಿ ಆಕೆಯನ್ನೂ ಆಧುನಿಕ ಸ್ತ್ರೀಯಾಗಿ ಪರಿವರ್ತಿಸಲು ಪ್ರಯತ್ನಿಸುತ್ತಾನೆ. ಉಡಿಗೆ ತೊಡಿಗೆಯಲ್ಲಿ ಕ್ರೈಸ್ತ ಧರ್ಮೀಯರನ್ನು ಅನುಸರಿಸಲು ಪ್ರೇರೇಪಿಸುತ್ತಾನೆ. ಅಷ್ಟೇ ಅಲ್ಲ ಕ್ರೈಸ್ತ ಹೆಂಗಸರು ಗಂಡಸರೊಂದಿಗೆ ಕುಳಿತು ಸರಾಗವಾಗಿ ಮಾತನಾಡುವುದೂ ತಮಾಷೆ ಮಾಡುವುದೂ ದೇವಯ್ಯನಿಗೆ ಆಪ್ಯಾಯಮಾನವಾಗಿತ್ತು. ಶಂಕರಪ್ಪ ಪುರೋಹಿತಶಾಹಿ ಬ್ರಾಹ್ಮಣರ ಆಚಾರ ವಿಚಾರಗಳನ್ನು ಅನುಸರಿಸುತ್ತಿದ್ದು ದೇವಯ್ಯನನ್ನು ದ್ವೇಷಿಸುತ್ತಿದ್ದ. ವಿಲಾಯಿತಿಯವರ ಅನುಕರಣೆ, ಅವರು ಕೊಟ್ಟ ಇನಾಮಗಳನ್ನು ಪಡೆದು ಕೊಳ್ಳುತ್ತಿದ್ದುದು ಶಂಕರಪ್ಪನಿಗೆ ಇಷ್ಟವಾಗುತ್ತಿರಲಿಲ್ಲ. ದೇವಯ್ಯ ಮತ್ತು ಶಂಕರಪ್ಪ ಈ ಇಬ್ಬರೂ ಜಾತಿಯಲ್ಲಿ ಗೌಡರಾದರೂ ಅನ್ಯ ಜಾತಿ ಬಗ್ಗೆ ಒಲವು ಹೆಚ್ಚು, ಪಾಶ್ಚಾತ್ಯರ ಉದಾರವಾದಿ ನೀತಿ ಭಾರತಕ್ಕೆ ಕಾಲಿಟ್ಟ ನಂತರ ವ್ಯಕ್ತಿ ಸ್ವಾತಂತ್ರ್ಯ ಸಾಮಾಜಿಕ ಸಮಾನತೆಯನ್ನು ಸಮರ್ಥಿಸಿದ ಉದಾರವಾದಿ ನೀತಿ ಬ್ರಾಹ್ಮಣೇತರರ ನಂತರದ ದಿವಸಗಳಲ್ಲಿ ದಲಿತ ಚಳುವಳಿಗೆ ಪ್ರೇರಣೆಯಾಯಿತು." (ಕು. ೯೦ ಶೂದ್ರ ಬ.ಸಾ.ನೆ.ಪು.57). ಎಂಬ ಮಾತು ಬರುತ್ತದೆ. ಬ್ರಾಹ್ಮಣರು ಶೂದ್ರರ ಮೇಲೆ ಹೇರಿದ್ದ ಧಾರ್ಮಿಕ ಬಂಧನಗಳನ್ನು ವಿರೋಧಿಸುತ್ತಿದ್ದ ದೇವಯ್ಯನಿಗೆ ಕ್ರೈಸ್ತಮತ ಸಹಜವಾಗಿಯೇ ಪ್ರಿಯವಾಗುತ್ತದೆ. ಆದರೆ ಕೊನೆಗೂ ದೇವಯ್ಯ ಮತಾಂತರ ಹೊಂದುವುದಿಲ್ಲ. ಹಿಂದೂವಾಗಿದ್ದುಕೊಂಡೇ ಬ್ರಾಹ್ಮಣರ ಹೇರಿಕೆಯನ್ನು ತಿರಸ್ಕರಿಸುತ್ತಾನೆ. ಒಂದು ಉದಾಹರಣೆ ನೀಡುವುದಿದ್ದಲ್ಲಿ ಕಲ್ಲೂರು ಮಂಜಯ್ಯ ಭಟ್ಟರು ದೇವಯ್ಯನನ್ನು ಕುರಿತು 'ಕಲ್ಲಯ್ಯ ಹೇಗಿದ್ದಾನೆ' ಎಂದು ಕೇಳುತ್ತಾರೆ. ಅದಕ್ಕೆ ದೇವಯ್ಯ ಇವನಿಗೆ ಸರಿಯಾಗಿ ಬುದ್ಧಿ ಕಲಿಸುತ್ತೇನೆ. ಎಂದು 'ಯಾರು? ಹಳೆಪೈಕದ ಕಲ್ಲನಾ? ಕಳ್ಳ ಬಗನಿ ಕಳ್ಳು ಇಳಿಸಾಕೆ ಹೋಗಿರಬೇಕು!' ಎಂದು ವ್ಯಂಗ್ಯವಾಡುತ್ತಾನೆ. ಹೀಗೆ ಬ್ರಾಹ್ಮಣಶಾಹಿ ನೀತಿಯನ್ನು ಮಟ್ಟ ಹಾಕಲೂ ಕ್ರೈಸ್ತ ಧರ್ಮದ ಪ್ರಭಾವ ಸಹಾಯಕವಾಗುತ್ತದೆ. ಇನ್ನೂ ಮುಂದುವರಿದು ನೋಡಿದರೆ ಸ್ವಾಮಿ ವಿವೇಕಾನಂದರ ಬಗೆಗಿನ ಪ್ರಸ್ತಾಪ ಕೃತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಅದು ಹತ್ತೊಂಬತ್ತನೆಯ ಶತಮಾನದ ಸಾಮಾಜಿಕ ಮತ್ತು ಧಾರ್ಮಿಕ ಚಳುವಳಿಗಳ ಪ್ರಭಾವವನ್ನು ಪರೋಕ್ಷವಾಗಿ ಬಿಂಬಿಸುತ್ತದೆ. ಮೂಢನಂಬಿಕೆಗಳಿಗೆ ಸಾಂಸ್ಥಿಕ ರೂಪವನ್ನು ಕೊಟ್ಟಿದ್ದ ಬ್ರಾಹ್ಮಣ ಮಠಗಳ ಬಗ್ಗೆ ಕಟು ಟೀಕೆಯೂ ಬರುತ್ತದೆ. ಬ್ರಾಹ್ಮಣ ವರ್ಗದವರು ಶೂದ್ರರನ್ನು ಅಜ್ಞಾನದಲ್ಲಿ ನಿರಂತರವಾಗಿ ಇಟ್ಟಿದ್ದೇ ಕ್ರೈಸ್ತ ಮತ ಶೂದ್ರರಿಗೆ ಹತ್ತಿರವಾಗಲು ಕಾರಣವಾಗುತ್ತದೆ. ಆದರೆ ಬ್ರಾಹ್ಮಣ ಮತ್ತು ಕ್ರೈಸ್ತ ಮಿಷಿನರಿಗಳ ಬಗ್ಗೆಯೂ ತಿರಸ್ಕಾರ ತೋರುತ್ತಿದ್ದ ವಿವೇಕಾನಂದರು ಜನರಿಗೆ ಅದರಲ್ಲೂ ವಿಶೇಷವಾಗಿ ಶೂದ್ರರಿಗೆ ಹತ್ತಿರವಾಗುತ್ತಾರೆ.



ದೇವಯ್ಯನ ತಲೆಗೆ ಯಾವ ಉಡುಪೂ ಇಲ್ಲದ್ದು, ಕ್ರಾಪು ಬಿಟ್ಟದ್ದು, ಗೀರಿನ ಶರಟು, ಕರಿಕೋಟು, ಕೆಂಪು ಅಂಚಿನ ಕಚ್ಚೆಪಂಚೆ ಉಟ್ಟದ್ದು, ಶಿವಮೊಗ್ಗದ ಕಡೆಯಿಂದ

ಆಮದಾದ ಮೆಟ್ಟುಗಳನ್ನು ತುಳಿದದ್ದು ಇವೆಲ್ಲ ಆತನಲ್ಲಿ ಆಗುತ್ತಿದ್ದ ಆಧುನಿಕ ಬದಲಾವಣೆಗಳು. ಆದರೆ ಕಿವಿಯ ಒಂಟಿ ಮಾತ್ರ ಗೌಡರ ಕುಲದವನ ಕುರುಹು ಹೇಳುತ್ತಿತ್ತು.

**ಪೂಜೆ :** ಕ್ರೈಸ್ತಪಾದ್ರಿ "ಪರಲೋಕದಲ್ಲಿರುವ ನಮ್ಮ ತಂದೆಯೇ, ನಿನ್ನ ನಾಮವು ಪರಿಶುದ್ಧವಾಗಲಿ, ನಿನ್ನ ರಾಜ್ಯವು ಬರಲಿ" ಎಂದು ಹೇಳುವುದನ್ನು ಹೊಸ ಧರ್ಮದ ಪರಿಚಯವಿಲ್ಲದ ಸೆಟ್ಟರಾಳು; ಇದು ಎಂಥದ್ದೋ ಇವರು ಹೇಳುವುದು, ಕಾಡಿಗೆ ಕೈ ಮುಗಿದು. ಒಂದು ದೇವರಿಲ್ಲ, ಒಂದು ಗುಡಿ ಇಲ್ಲ. ನಮ್ಮ ಪೆರಡೂರಿನ ಮೇಳದವರು ಇದಕ್ಕಿಂತಲೂ ಚೆನ್ನಾಗಿ ಹೇಳುತ್ತಾರೆ, ಭಾಗವತರಾಟದಲ್ಲಿ" ಎನ್ನುತ್ತಾನೆ. ಮತಾಂತರಗೊಳ್ಳುವುದರಿಂದ ಆಧುನಿಕತೆಯನ್ನು ಕಂಡುಕೊಳ್ಳಬಹುದೆಂಬುದು ಅಷ್ಟೇನೂ ಆಶಾದಾಯಕ ವಿಚಾರವಲ್ಲ ಎಂಬ ಮಾತು ಕಾದಂಬರಿಯ ಒಳಸ್ರೋತವಾಗಿ ಮೂಡಿಬಂದಿದೆ.

ಬಚ್ಚ ಕ್ರೈಸ್ತ ಧರ್ಮದ ಪ್ರಕಾರ ಮಂಡಿಯೂರಿ ಕುಳಿತುಕೊಳ್ಳುವುದು ಅನುಕರಣೆ ತೋರಿಸುತ್ತದೆ. ಆದರೂ ಐತ 'ಮಂಡಿನಾರು ಊರ್‍ಲಿ ಕುಂಡಿನಾರು ಊರ್‍ಲಿ' ಎಂದು ಹಾಸ್ಯಮಾಡುತ್ತಾನೆ. ಬಚ್ಚ ದೇವಯ್ಯನ ಜೊತೆ ಕ್ರೈಸ್ತ ಧರ್ಮಕ್ಕೆ ಸೇರುವುದು, ತಿಮ್ಮಿಯ ತಾಯಿಯಾದ ಸೇಸಿಗೂ ಇಷ್ಟವಿಲ್ಲ. "ಜಾತಿ ಕೆಟ್ಟವನಿಗೆ ಕೊಡೋ ಬದಲು ಹಾಳು ಬಾವಿಗೆ ಹಾಕಾದು ಲೇಸು" ಎಂಬ ಸೇಸಿಯ ಮಾತಿನಲ್ಲಿ 'ಸ್ವಧರ್ಮೇ ನಿಧನಂ ಶ್ರೇಯಃ' ಎಂಬ ಮಾತಿನ ಪ್ರಭಾವವಿದೆ. ಹೊಸ ಧರ್ಮವನ್ನು ಅಷ್ಟು ಬೇಗ ಹೊಂದಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಅಲ್ಲಿದೆ. ತಿಮ್ಮಿ ಕೆಳವರ್ಗದವಳಾದರೂ ಅವಳದು ಅಪ್ಪಟ ಪ್ರೀತಿ. ಬಚ್ಚನ ಒಡವೆಯನ್ನೂ ಅಲ್ಲೇ ಬಿಟ್ಟು ಆಕೆ ಗುತ್ತಿಯನ್ನು ಹಿಂಬಾಲಿಸುತ್ತಾಳೆ. ಒಡವೆಗಿಂತ ಪ್ರೀತಿ ಅಮುಲ್ಯವಾದದ್ದು ಎಂಬುದನ್ನು ಸಾರುತ್ತ ನವೋದಯ ಕಾಲದ ರೋಮ್ಯಾಂಟಿಸಂಗೆ ಆಕೆ ಹತ್ತಿರವಾಗುತ್ತಾಳೆ.

## ಶಿಕ್ಷಣ

ಕ್ರೈಸ್ತರು ನೀಡಿದ ಮಹತ್ತರ ಕೊಡುಗೆಗಳಲ್ಲಿ ಶಿಕ್ಷಣವೂ ಒಂದು. ಶಿಕ್ಷಣದ ಮೂಲಕ ಹೊಸ ಸಮಾಜವನ್ನು ಕಟ್ಟುವ ಕೆಲಸ ಅವರದ್ದಾಗಿತ್ತು. ಕೇವಲ ಕೂಲಿಮಠಗಳಲ್ಲಿ ಓದುತ್ತಿದ್ದ ಮಕ್ಕಳು ವಸಾಹತುಶಾಹಿ ಪರಿಣಾಮದಿಂದ ಪ್ರೈಮರಿ ಶಾಲೆಗಳಲ್ಲಿ ಓದುವಂತಹ ಮಟ್ಟಕ್ಕೆ ಬರುತ್ತಾರೆ. "ಇಂಗ್ಲೀಷ್‌ನ ಪ್ರಭಾವವು ಮೊಳೆದೋರುತ್ತಿದ್ದ ಸಂಧಿ ಸಮಯದಲ್ಲಿ ಮಲೆನಾಡಿಗೆ ಆ ಹೊಸ ಪ್ರಭಾವದ ಮುಂಬೆಳಕನ್ನು ಮೊತ್ತಮೊದಲು ತರುವುದರಲ್ಲಿ ಕ್ರೈಸ್ತ ಪಾದ್ರಿಗಳ ಪಾತ್ರ ಗಣನೀಯವಾಗಿತ್ತು. ತಮ್ಮ ಮತಕ್ಕೆ ಜನರನ್ನು ಸೇರಿಸಿಕೊಳ್ಳುವ ಧಾರ್ಮಿಕ ಪ್ರಯತ್ನಕ್ಕೆ

ಪೀಠಿಕೆಯಾಗಿತ್ತು. ಬ್ರಾಹ್ಮಣರು ಒಡ್ಡಿದ ಮೂಢ ಮತಾಚಾರಗಳ ಕೂಣಿಗೆ ಹಿಂದುಳಿದವರು ಸಿಕ್ಕಿ ಬಿದ್ದಿದ್ದರು. ಅವರನ್ನು ಆ ಕೂಣಿಯಿಂದ ತಪ್ಪಿಸಿ ರಕ್ಷಿಸುವ ನೆವದಲ್ಲಿ ಕ್ರೈಸ್ತಪಾದ್ರಿಗಳು ತಮ್ಮ ಮತದ ಬಲೆ ಬೀಸಿ ಅದರೊಳಕ್ಕೆ ಹಾರಿ ಬೀಳುವ ಪ್ರಾಣಿಗಳನ್ನು ಭಕ್ಷಿಸುವ ಅಥವಾ ರಕ್ಷಿಸುವ ಅಭಿಸಂಧಿಯನ್ನಿಟ್ಟುಕೊಂಡಿದ್ದರು. ಕ್ರೈಸ್ತ ಪಾದ್ರಿಗಳು ಮಂಡಗದ್ದೆಯಲ್ಲಿ ಹೆರಿಗೆ ಆಸ್ಪತ್ರೆ, ತೀರ್ಥಹಳ್ಳಿ, ದೇವಂಗಿ ಮೊದಲಾದೆಡೆಗಳಲ್ಲಿ ಸ್ಕೂಲುಗಳನ್ನೂ ಸ್ಥಾಪಿಸಿದ್ದರು. ಮಲೇರಿಯಾದಲ್ಲಿ ನರಳಿ ನೂರಕ್ಕೆ ತೊಂಬತ್ತೊಂಬತ್ತರಷ್ಟು ಬಸುರಿ ಬಾಣಂತಿಯರು ಸಾವನ್ನಪ್ಪುತ್ತಿದ್ದರು. ಅಂಥ ತರುಣ ವಯಸ್ಸಿನ ಮಾತೆಯರನ್ನು ಕಾಪಾಡಿ, ತಾವು ಕರುಣೆಯ ಅವತಾರವಾದ ಯೇಸುಕ್ರಿಸ್ತನ ಅನುಯಾಯಿಗಳೆಂಬುದನ್ನು ಕ್ರೈಸ್ತರು ಪ್ರತ್ಯಕ್ಷ ನಿದರ್ಶನದಿಂದ ತೋರಿಸಿಕೊಡುತ್ತಿದ್ದರು. ಜನರ ಅನುರಾಗ ವಿಶ್ವಾಸಗಳನ್ನೂ ಕೃತಜ್ಞತೆಯನ್ನೂ ಸೂರೆಗೊಂಡು ತಮ್ಮ ಮೂಲೋದ್ದೇಶವಾದ ಮತಾಂತರಗೊಳಿಸುವ ಕಾರ್ಯಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು.

ಒಟ್ಟಾರೆ ತಮ್ಮ ಮೂಲಕರ್ತವ್ಯಕ್ಕೆ ಅಣಿಯಾಗಿದ್ದು, ಮಿಷನರಿಗಳು ಮೇಗರವಳ್ಳಿಯಲ್ಲೂ ಮಿಶನ್‌ಶಾಲೆ ಕಟ್ಟಿದರು. ಹಂದಿಯಿಂದ ರಕ್ಷಣೆಗೆ ಬೇಲಿನಿರ್ಮಾಣ, ಆಟಕ್ಕೆ ಬಯಲು ನಿರ್ಮಾಣ, ಬೆಂಚುಗಳನ್ನು ಮಾಡಿಸುವ ಮೂಲಕ ಹೊಸ ಪೀಠೋಪಕರಣ, ಬಾವಿ ತೆಗೆಸುವ ಮೂಲಕ ನೀರಿನ ವ್ಯವಸ್ಥೆ ಹೀಗೆ ಶಾಲೆಗೆ ಬೇಕಾದ ಎಲ್ಲಾ ವ್ಯವಸ್ಥೆಯೂ ಗ್ರಾಮದವರ ನೆರವಿನಿಂದ ನಡೆಯುತ್ತಿತ್ತು. ಆಧುನಿಕತೆಯ ಪ್ರವಾಹದಲ್ಲಿ ಗ್ರಾಮದ ಜನರನ್ನು ಒಳಗು ಮಾಡುವ ಪ್ರಕ್ರಿಯೆಯಲ್ಲೂ ಕ್ರೈಸ್ತ ಪಾದ್ರಿಗಳು ಪಾಲುದಾರರಾಗಿರುವುದನ್ನು ಗಮನಿಸಬಹುದು. ಕ್ರೈಸ್ತ ಪಾದ್ರಿಗಳನ್ನು ಉಪಾಧ್ಯಾಯರನ್ನಾಗಿ ನೇಮಿಸಿದರೆ ಜನರು ತಮ್ಮ ಮಕ್ಕಳನ್ನು ಮತಾಂತರಗೊಳಿಸುತ್ತಾರೆಂಬ ಭಯ, ಅನುಮಾನದಿಂದ ಶಾಲೆಗೆ ಕಳುಹಿಸದಿರಬಹುದೆಂದು ಎಣಿಸಿ ಬ್ರಾಹ್ಮಣರನ್ನು ಉಪಾಧ್ಯಾಯರನ್ನಾಗಿ ನೇಮಿಸುತ್ತಾರೆ. ಮುಂದೆ ಮೇಗರವಳ್ಳಿ ಅಂತಕ್ಕನ ಮನೆ ಹೋಟ್ಲು ಮನೆಯಾಗಿ ಕ್ರಮೇಣ ವಿದ್ಯಾರ್ಥಿನಿಲಯವಾಗಿ ಪರಿವರ್ತನೆ ಹೊಂದುತ್ತದೆ. ಹಳ್ಳಿಯಿಂದ ಬರುವ ವಿದ್ಯಾರ್ಥಿಗಳಿಗೆ ಇದು ನೆರವಾಗುತ್ತದೆ. ಇಂದು ಆಂಗ್ಲ ಶಿಕ್ಷಣ ಮಾಧ್ಯಮ ಇಡೀ ಮಲೆನಾಡನ್ನು ವ್ಯಾಪಿಸಿ ಹೊಸ ಜೀವನಕ್ಕೆ ನಾಂದಿ ಹಾಡಿದೆ.

ಹೂವಯ್ಯ ಊರಿಗೆ ಬಂದಾಗ ಇಂಗ್ಲೀಷ್ ಪತ್ರಿಕೆ ಓದುವುದು, ರಾಮಯ್ಯನೂ ಇಂಗ್ಲೀಷ್ ಪುಸ್ತಕ ಓದುವುದು, ಅದರಲ್ಲಿದ್ದ ವಿಷಯಗಳನ್ನು ಚರ್ಚಿಸುವುದು ನಡೆಯುತ್ತಿತ್ತು. ಭಾರತೀಯರ ಸ್ವರಾಜ್ಯ ಸಂಪಾದನೆಯ ಪ್ರಯತ್ನ, ಸಂಕಟಗಳು, ರಾಷ್ಟ್ರನಾಯಕರ ಆಂದೋಲನಕಾರರ ಉಪನ್ಯಾಸಗಳು, ಬ್ರಿಟೀಷರ ದಬ್ಬಾಳಿಕೆ, ದಕ್ಷಿಣ ಆಫ್ರಿಕಾದ ಭಾರತೀಯರ ಮೇಲೆ ನಡೆಯುತ್ತಿದ್ದ ಅತ್ಯಾಚಾರಗಳು, ಮುಖಂಡರ ದಸ್ತಗಿರಿಗಳು ಇವೆಲ್ಲವನ್ನೂ ಓದಿ

ಹೂವಯ್ಯ ಸಂಕಟಗೊಳ್ಳುತ್ತಾನೆ. ದೇಶಭಕ್ತಿಗಾಗಿ ಆತನ ಮನಸ್ಸು ತುಡಿಯುತ್ತದೆ. ಹುತಾತ್ಮರಿಗಾಗಿ ಸಂಕಟಪಡುತ್ತದೆ. ಹೀಗಾಗಿ ಈ ನಾಡಿನಲ್ಲಿ ಬೆಳೆದ ಒಬ್ಬ ವ್ಯಕ್ತಿ ದೇಶಭಕ್ತನಾಗಿ ರೂಪುಗೊಳ್ಳುತ್ತಾನೆ.

"ಮಲೆನಾಡಿನಲ್ಲಿ 'ನೇಟಿವ್ ಕನ್ವರ್ಸ್'ಗೆ ವಿರೋಧ ವ್ಯಕ್ತಪಡಿಸಿ ಮೈಸೂರಿನಲ್ಲಿ ಅನೇಕ ಚಳುವಳಿಗಳು ನಡೆದ ಬಗ್ಗೆ ಸಾಕಷ್ಟು ಪ್ರಸ್ತಾಪ ಬರುತ್ತದೆ. ಹಳೆಯ ರಾಜ್ಯಗಳಳಿದು ಬ್ರಿಟಿಷ್ ಚಕ್ರಾಧಿಪತ್ಯ ಸುಭದ್ರವಾಗಿ ಕಾಲೂರುತ್ತಿದ್ದ ಆ ಕಾಲದಲ್ಲಿ ಹೊಸ ಕಾನೂನುಗಳು ಹೊಸ ಹೆಸರಿನ ಅಧಿಕಾರಿಗಳು, ಹೊಸ ಹೊಸ ರೂಲೀಸುಗಳು ಜಾರಿಗೆ ಬರುತ್ತಿದ್ದುದರಿಂದ ತಕ್ಕಮಟ್ಟಿಗೆ ಇಂಗ್ಲೀಷ್ ತಿಳಿದಿದ್ದ ಆ ಪಾದ್ರಿ ಸರಕಾರದ ವ್ಯವಹಾರಗಳಲ್ಲಿ ಅವರಿಗೆ ನೆರವು, ನೀಡುತ್ತಿದ್ದರು. ಹಳ್ಳಿಯವರು ತೀರ್ಥಹಳ್ಳಿಗೆ ಹೋದಾಗ ಆಸ್ಪತ್ರೆ, ಡಾಕ್ಟರ್, ಅಮಲ್ದಾರರು, ಪೋಲೀಸಿನವರು, ಪೋಸ್ಟಾಫೀಸು, ಕಾಫಿ ಹೋಟೆಲ್, ಇಸ್ಕೂಲು ಮುಂತಾದ ತಾವು ಹಿಂದೆಂದೂ ಕೇಳದಿದ್ದ ಭಾಷೆಯ ಹೆಸರುಗಳಿಗೆ ದಿಗಿಲು ಪಟ್ಟು ಕೊಳ್ಳುತ್ತಿದ್ದಾಗ ಪಾದ್ರಿಯಿಂದ ಅವರಿಗೆ ತುಂಬಾ ಉಪಕಾರವಾಗುತ್ತಿತ್ತು (ಮ.ಮ. ಪು.೨೦೭). ಮಲೆನಾಡಿನ ಗೌಡರ ಅನಕ್ಷರತೆ ಆ ಕಾಲದಲ್ಲಿ ಮಾಮೂಲಿ ವಿಷಯವಾಗಿತ್ತು. ಸುತ್ತಲಿನ ನಾಲ್ಕಾರು ಹಳ್ಳಿಯೇ ಅವರ ಲೋಕವಾಗಿತ್ತು. ಪಟ್ಟಣದ ಸಂಪರ್ಕವಾಗಲಿ, ಇಂಗ್ಲೀಷ್ ಭಾಷೆಯ ಪರಿಚಯವಾಗಲೀ ಇಲ್ಲದ ಇವರು ವಿಲಾಯಿತಿ ಪಾದ್ರಿಯ ಮಾರ್ಗದರ್ಶನವನ್ನು ಅವಲಂಬಿಸಿದ್ದರು. ಈ ದೃಷ್ಟಿಯಿಂದ ಮಲೆನಾಡಿನ ಗೌಡರ ಜೀವನ ಯಾವ ತೊಂದರೆಯೂ ಇಲ್ಲದೆ ಸಾಗುತ್ತಿತ್ತು.

ಆಂಗ್ಲ ಭಾಷೆಯ ಸ್ಕೂಲುಗಳು ಪ್ರಾರಂಭವಾದಾಗ ಬ್ರಾಹ್ಮಣರು ಆ ಸ್ಕೂಲುಗಳೆಲ್ಲ ತಮಗೆ ಮಾತ್ರ ಮೀಸಲೆಂಬ ಮನೋಭಾವದಿಂದ ವರ್ತಿಸುತ್ತಿದ್ದರು. ವಿಜಯನಗರ ಮೊದಲಾದ ಹಿಂದೂ ರಾಜ್ಯಗಳ ದೊರೆಗಳಂತೆ ಇಂಗ್ಲೀಷರು ಬ್ರಾಹ್ಮಣರ ಶಾಪಕ್ಕೆ ಹೆದರಲಿಲ್ಲವಾದ್ದರಿಂದ ಶೂದ್ರರ ಮಕ್ಕಳೂ ಶಾಲೆಗಳಿಗೆ ಪ್ರವೇಶಿಸುವಂತಾಯ್ತು. ಆದರೆ? ಬ್ರಾಹ್ಮಣರು ತಮ್ಮ ಮಕ್ಕಳ ಮಡಿಯನ್ನು ಕೆಡಿಸಿಕೊಳ್ಳಲು ಸಿದ್ಧರಿರಲಿಲ್ಲ. ಆದ್ದರಿಂದ ಬ್ರಾಹ್ಮಣ ಉಪಾಧ್ಯಾಯರು ಜನಿವಾರದ ಹುಡುಗರನ್ನೆಲ್ಲ ಬೆಂಚಿನ ಮೇಲೆ ಕೂರುವಂತೆ ಮಾಡಿ, ಒಕ್ಕಲಿಗರೇ ಮೊದಲಾದ ಶೂದ್ರರ ಹುಡುಗರನ್ನು ತುಸುದೂರ ನೆಲದ ಮೇಲೆ ಕೂರುವಂತೆ ಮಾಡುತ್ತಿದ್ದರು. ಕ್ರೈಸ್ತ ವಿದ್ಯಾಧಿಕಾರಿಗಳಿಗೆ ಇದು ಗೊತ್ತಾಗಿ ಆಕ್ಷೇಪಿಸಿದರು. ಆಗ ಬೆಂಚುಗಳಿಗೆ ಬ್ರಾಹ್ಮಣದೀಕ್ಷೆ ಕೊಟ್ಟುಬಿಟ್ಟರು. ಕೆಲವು ಬೆಂಚುಗಳು ಬ್ರಾಹ್ಮಣ ಬೆಂಚುಗಳಾಗಿ ಮತ್ತೆ ಕೆಲವು ಬೆಂಚುಗಳು ಶೂದ್ರ ಬೆಂಚುಗಳಾದವು. ಆದರೆ ಪಾಪ, ಬ್ರಾಹ್ಮಣರ ಗ್ರಹಚಾರಕ್ಕೆ ಒಕ್ಕಲಿಗರು, ಕ್ರೈಸ್ತರು, ಮುಸಿಲ್ಮಾನರು ಓದಲು ಬರುತ್ತಿದ್ದ ಕಾಲವದು. ಹೊಲೆಯರು ಮೊದಲಾದ

ಅಸ್ಪೃಶ್ಯರ ಮಕ್ಕಳೂ ಶಾಲೆಗೆ ಬಂದು ಸೇರತೊಡಗಿದರು. ಈಗೇನು ಮಾಡುವುದು? ಅವರನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಮೇಲೆಯೇ ಕೂರಿಸಲಾಯಿತು. ಬ್ರಾಹ್ಮಣರಾದ ತಮಗೆ ಆಕ್ಷೇಪ ಬಂದಂತೆ, ಗೌಡರ ಮಕ್ಕಳು ಹೊಲೆಯರೊಡನೆ ಕೂರಲು ಒಪ್ಪಲಿಲ್ಲ. ಗೌಡರುಗಳಲ್ಲಿ ಕೆಲವು ಶ್ರೀಮಂತ ಮತ್ತು ಪ್ರತಿಷ್ಠಿತ ಮನೆಗಳವರು ಬ್ರಾಹ್ಮಣರ ಪಕ್ಷವೇ ನಿಂತು ತಮ್ಮ ಜೀತದವರಾದ ಹೊಲೆಯರನ್ನು ತಾವು ದೂರ ಅಂಗಳದಲ್ಲಿಯೇ ನಿಲ್ಲಿಸುವುದರಿಂದ ಅವರ ಕೊಳಕು ಹುಡುಗರು ತಮ್ಮ ಮಕ್ಕಳ ಮೈ ಮುಟ್ಟುವಂತೆ ಕೂರಲಾಗದು ಎಂದರು. ಶಕ್ತರ ಸಂಖ್ಯೆಯೇ ಅಧಿಕವಾಗಿದ್ದುದರಿಂದ ಅಧಿಕಾರಿಗಳು ಶಾಲೆಗಳನ್ನು ಸುಗಮವಾಗಿ ನಡೆಸುವ ಹೊಣೆಗೆ ತಲೆಬಾಗಿ ಆ ವಿಚಾರದಲ್ಲಿ ನಿಷ್ಠುರ ವರ್ತನೆಗೆ ಹೋಗಲಿಲ್ಲ. ಜೊತೆಗೆ ಅಧಿಕಾರಿಗಳಲ್ಲಿಯೂ ಕೆಲವರು "ಧರ್ಮಗ್ಲಾನಿ"ಗೆ ಅವಕಾಶ ಕೊಡಲು ಒಪ್ಪಲಿಲ್ಲ.

ಇಲ್ಲಿ ಹೊಸ ಶಿಕ್ಷಣ ಪದ್ಧತಿಯ ಹೊಂದಾಣಿಕೆಯಲ್ಲೂ ಜಾತಿ ಸ್ವಾರ್ಥವನ್ನು ಕಾಣುತ್ತೇವೆ. ಬ್ರಾಹ್ಮಣ ಮತ್ತು ಗೌಡರು ತಮ್ಮ ಜಾತಿ ಪ್ರತಿಷ್ಠೆ ಉಳಿಸಿಕೊಳ್ಳಲು ಶೂದ್ರರನ್ನು ಶೋಷಿಸುವುದು ಸ್ವಾರ್ಥವಲ್ಲದೆ ಮತ್ತೇನು?

**ವಿವಾಹ ವಿಚ್ಛೇದನ :**

ವಿವಾಹ ವಿಚ್ಛೇದನ ಎಂಬ ಪದ ಬಂದದ್ದೇ ಪಾಶ್ಚಾತ್ಯರ ಆಗಮನದಿಂದ. ಹಿಂದೂ ಸಂಸ್ಕೃತಿಯಲ್ಲಿ ಅಗ್ನಿಸಾಕ್ಷಿಯಾಗಿ ಕೈಹಿಡಿದ ಗಂಡ ಎಂಥವನಾದರೂ ಹೊಂದಿಕೊಂಡು ಹೋಗಬೇಕಿತ್ತು. ಆದರೆ ವಸಾಹತುಶಾಹಿ ಪ್ರಭಾವದಿಂದ ಗಂಡನಿಂದ ಹೆಂಡತಿಯನ್ನು ದೂರಮಾಡುವ ಪ್ರಸಂಗ ಬಲವಂತವಾಗಿ ನಡೆಯುತ್ತಿದೆ. ದೇವಯ್ಯನಿಗೆ ತನ್ನ ಹೆಂಡತಿಯನ್ನು ಬಿಡಲು ಇಷ್ಟವಿಲ್ಲದಿದ್ದರೂ ಪಾದ್ರಿ ಜೀವರತ್ನಯ್ಯ ತನ್ನ ಮಗಳನ್ನು ದೇವಯ್ಯನಿಗೆ ಕೊಡಲು ನಿರ್ಧರಿಸುತ್ತಾನೆ. ಪಾದ್ರಿ ಕಾನೂನು ಬದ್ಧವಾಗಿ ವಿಚ್ಛೇದನಕ್ಕೆ ತಿಳಿಸಿ ಅಂದು ಮೈಸೂರಿನಲ್ಲಿದ್ದ ಕಾನೂನನ್ನು ತಿಳಿಸುತ್ತಾನೆ. ಆದರೂ ದೇವಯ್ಯ "ಬ್ರಿಟೀಷರ ಆಳ್ವಿಕೆಯ ಪ್ರಾಂತಗಳಲ್ಲಿ ಹಿಂದೂ ಅವಿಭಕ್ತ ಕುಟುಂಬದ ಒಬ್ಬನು ಅನ್ಯಮತಾವಲಂಬಿಯಾದರೆ ಅವನಿಗೆ ತನ್ನ ಪಿತ್ರಾರ್ಜಿತ ಆಸ್ತಿ ಹಕ್ಕು ದಕ್ಕುತ್ತಿದ್ದರೂ [Act XXI by ೧೮೫೦] ಮೈಸೂರು ಸಂಸ್ಥಾನದಲ್ಲಿ ಆ ಹಕ್ಕು ಇಲ್ಲ. ಸದ್ಯದಲ್ಲಿ ಕ್ರೈಸ್ತನಾಗುವುದು ಅಸಿಂಧು ಎಂದು ಹೇಳುತ್ತಾನೆ. ಲೇಕ್‌ಹಿಲ್ ದೊರೆಗಳ ಶಿಫಾರಸ್ಸನ್ನು ಕುರಿತೂ ಹೇಳುತ್ತಾನೆ.

ಬಲವಂತವಾಗಿಯಾದರೂ ದೇವಯ್ಯನ ಹೆಂಡತಿಗೆ ವಿಚ್ಛೇದನ ಕೊಡಿಸಲು ಮಿಷನ್ ಸ್ಕೂಲಿನ ಪ್ರಾರಂಭೋತ್ಸವದಂದು ದೇವಯ್ಯನನ್ನು ಮಿಷಿನರಿಗಳು ಕರೆಸುತ್ತಾರೆ. ಇದರ

ಹಿನ್ನೆಲೆ ಅರಿತ ದೇವಯ್ಯ ಮುಕುಂದಯ್ಯನನ್ನು ಚಕ್ರವ್ಯೂಹ ಭೇದಿಸುವ ಅಭಿಮನ್ಯುವನ್ನಾಗಿ ಬಳಸಿಕೊಳ್ಳುತ್ತಾನೆ. ಇದರಿಂದಾಗಿ ಮಿಷಿನರಿಗಳ ಮತಾಂತರ ಪ್ರಯತ್ನ ಮುರಿದು ಬೀಳುತ್ತದೆ.

ಮುಕುಂದಯ್ಯ ರೆವರೆಂಡ್ ಲೇಕ್‌ಹಿಲ್‌ರೊಂದಿಗೆ ವಿಷಯ ಪ್ರಸ್ತಾಪನೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಅವನ ಅಪ್ಪಣೆ ಮೇರೆಗೆ ಲೇಕ್‌ಹಿಲ್‌ರು ಕೊಡುವ ತೀರ್ಮಾನ ಇಂತಿದೆ. "ನಾವೇನೂ ನಿಮ್ಮನ್ನು ಬಲತ್ಕಾರವಾಗಿ ಕ್ರೈಸ್ತಮತಕ್ಕೆ ಸೇರಿಸುತ್ತಿಲ್ಲ. ನಿಮ್ಮ ಹೆಂಡತಿಯನ್ನು ನೀವು ಒಪ್ಪಿಸದಿದ್ದರೆ ಅದು ನಿಮ್ಮ ತಪ್ಪು. ಅದು ನನಗೆ ಮೊದಲೇ ಗೊತ್ತಿದ್ದರೆ ನಿಮ್ಮನ್ನು ಮತಾಂತರಿಸಲು ನಾನೇ ಒಪ್ಪುತ್ತಿರಲಿಲ್ಲ. ಕ್ರೈಸ್ತರಿಗೆ ನಿಮ್ಮ ಕುಟುಂಬವನ್ನು ನಾಶಗೊಳಿಸುವ ಉದ್ದೇಶ ಎಂದೂ ಇರುವುದಿಲ್ಲ." ಎಂದು ಹೇಳಿ ಉಪದೇಶಿಗಳೇ, ನೀವು ಅದನ್ನೆಲ್ಲ ಮೊದಲೇ ಅರಿಯಬೇಕಿತ್ತು. ಹೋಗಿ ದೇವಯ್ಯಗೌಡರ ಭಾವನಿಗೆ ವಿಷಯ ತಿಳಿಸಿ ಎಂದು ಹೇಳುತ್ತಾರೆ. ಆದರೆ ಪಾದ್ರಿ ಜೀವರತ್ನಯ್ಯ ಮುಕುಂದಯ್ಯನ ಮೇಲೆ ಇಲ್ಲಸಲ್ಲದ ಆರೋಪ ಹೊರಿಸುತ್ತಾರೆ.

ಲೇಕ್‌ಹಿಲ್ ಸಾಹೇಬರು ಬ್ರಾಹ್ಮಣಶಾಹಿ ವಿರೋಧಿಯಾಗಿದ್ದು ಶೂದ್ರರ ಉದ್ಧಾರವಾಗಬೇಕಾದರೆ ಬ್ರಾಹ್ಮಣಶಾಹಿ ವ್ಯವಸ್ಥೆಯನ್ನು ದೂರಸರಿಸಬೇಕೆಂದು ಸಲಹೆ ನೀಡುತ್ತಾರೆ. ಹೊಸ ಶಾಲಾ ಪ್ರಾರಂಭೋತ್ಸವಕ್ಕೆ ಬರುವಂತೆ ಬ್ರಾಹ್ಮಣೇತರರಿಗೆ ಆಹ್ವಾನ ನೀಡುತ್ತಾರೆ. ಅದಕ್ಕೆ ಪ್ರತಿಕ್ರಿಯೆ ಎಂಬಂತೆ ಕಾಡು, ತಿಮ್ಮು, ಹಳೆಮನೆ ಧರ್ಮು, ಹೆಂಚಿನ ಮನೆ ರಾಮು ಎಲ್ಲರನ್ನೂ ಶಾಲೆ ಶುರುವಾದ ತಕ್ಷಣ ಶಾಲೆಗೆ ಸೇರಿಸಲು ದೇವಯ್ಯ, ಮುಕುಂದಯ್ಯ ಸಿದ್ಧರಾಗುತ್ತಾರೆ.

ಕ್ರೈಸ್ತರ ಮೂಲ ಉದ್ದೇಶ ಮತಾಂತರವಾದರೂ ಅದು ಬಲವಂತವಾಗಿ ಆಗಬಾರದೆಂಬ ನಿಯಮವಿದೆ. ಎಷ್ಟೋ ಜನ ಪಾದ್ರಿಗಳು ಕ್ರೈಸ್ತರ ಈ ನಿಯಮವನ್ನು ಪಾಲಿಸುತ್ತಾರೆ. ಹಲವಾರು ಆಸೆ ಆಮಿಷ ತೋರಿಸಿಯೇ ಮತಾಂತರಿಸಲು ಇಷ್ಟ ಪಡುತ್ತಾರೆ. ಕೇವಲ ಆಸ್ಪತ್ರೆ, ಶಾಲೆ, ಲೋಕೋಪಯೋಗಿ ಕಾರ್ಯವೆಂದು ಕುಳಿತರೆ ಪಾದ್ರಿತನದಿಂದ ರೆವರೆಂಡ್ ಹುದ್ದೆಗೆ ಬಡ್ತಿಹೊಂದುವುದು ದುಸ್ತರವಾಗುತ್ತದೆ. ಆದರೆ ಇವೆಲ್ಲವೂ ಹಂತಹಂತವಾಗಿ ಮಲೆನಾಡಿನೊಳಕ್ಕೆ ಪ್ರವೇಶಿಸಿ ಅಲ್ಲಿನ ಸಾಮಾಜಿಕ ಬದುಕನ್ನು ಪಲ್ಲಟಿಸಿತು ಎಂಬುದು ಮುಖ್ಯವಾದ ಮಾತು. ಕೀರ್ತಿನಾಥ ಕುರ್ತುಕೋಟಿಯವರು ಹೇಳುವಂತೆ 'ಮುಕುಂದಯ್ಯ, ಐತ, ಗುತ್ತಿ, ದೇವಯ್ಯ ಇವರಲ್ಲಿ ಯಾರೂ ಬುದ್ಧಿವಂತರಲ್ಲ ಎಂಬ ಮಾತನ್ನು ನಂಬಲು ಅಸಾಧ್ಯ (ಪು.೧೨೮ ವಿಮರ್ಶೆಯ ವಿನಯ ಲೇ: ಕೀರ್ತಿನಾಥ

ಕುರ್ತಕೋಟಿ) ಮುಕುಂದಯ್ಯ ಪರಿಸರದ ವಿಷಯ, ಆಧ್ಯಾತ್ಮ ವಿಷಯಗಳನ್ನು ಅರಿತರೆ, ಐತ ಅವನನ್ನೆ ಅನುಸರಿಸಿ ನೆಮ್ಮದಿಯ ಜೀವನ ಸಾಗಿಸುವಲ್ಲೇ ತೃಪ್ತಿಕಾಣುತ್ತಾನೆ. ಗುತ್ತಿ ಪ್ರೀತಿಗಾಗಿ ಇಡೀ ವ್ಯವಸ್ಥೆಯನ್ನೇ ವಿರೋಧಿಸಿ ತಿಮ್ಮಿಯನ್ನು ಕದ್ದೊಯ್ಯುತ್ತಾ ಇಂಥದ್ದರಲ್ಲೆ ಇವರು ಆ ವ್ಯವಸ್ಥೆಗೆ ಹೊಸ ಕಳೆಯನ್ನು ನೀಡುತ್ತಾರೆ. ಎಲ್ಲರೂ ಆದರ್ಶ ಪ್ರಾಯ ನವನಾಗರಿಕತೆಗೆ ಮುಖಮಾಡಿದ್ದಾರೆ. ದೇವಯ್ಯ ಮಾತ್ರ ಹೊಸತನ್ನು ಬಯಸಿ ಸಮಾಜದ ಬೆಳವಣಿಗೆಗೆ ಆಶಿಸಿ ಕ್ರೈಸ್ತಧರ್ಮದ ಕಡೆ ತಿರುಗಿದರೂ ಅವನ ಚಪಲ ಮನಸ್ಸು ಶೋಕಿ ವಿಷಯವಾದ ಹೆಣ್ಣಿನ ವಿಷಯಕ್ಕೆ ಮನಸೋತು ವಿಧಿ ಇಲ್ಲದೆ ಕ್ರೈಸ್ತ ಧರ್ಮದ ಖೆಡ್ಡದಲ್ಲಿ ಬೀಳುತ್ತಾನೆ. ಆದರೂ ಅದರಿಂದ ಹೊರ ಬರಲು ಪ್ರಯತ್ನಿಸಿ ಅದಕ್ಕೆ ಸೂಕ್ತ ವ್ಯಕ್ತಿಗಳನ್ನು ಆಯ್ಕೆ ಮಾಡಿಕೊಂಡು (ಮುಕುಂದಯ್ಯ) ತನ್ನ ಕಾರ್ಯ ಸಾಧಿಸುತ್ತಾನೆ. ಆಧುನಿಕತೆಯ ಪ್ರವೇಶದ ಮುಖ್ಯ ಅಂಗಗಳಲೊಂದಾದ ಮತ ಪರಿವರ್ತನೆಯು ಮಲೆನಾಡಿನಲ್ಲಿ ಸಾಧಿತವಾಯಿತೋ ಇಲ್ಲವೋ ಎನ್ನುವುದಕ್ಕಿಂತ ದೇವಯ್ಯ ಆದಿಯಾಗಿ ಅನೇಕರು ಚಂಚಲಚಿತ್ತರಾದರೆಂಬುದು ಗಮನಾರ್ಹ ವಿಚಾರ.

**ಕಾಫಿ ಪ್ರವೇಶ**

ಮಲೆನಾಡಿಗೆ ಕಾಫಿಯ ಪ್ರವೇಶವಾಗಿದ್ದೇ ಬ್ರಿಟೀಷ್ ಪಾದ್ರಿಯಿಂದ ಅವರು ಬಂದಾಗಲೆಲ್ಲಾ ಅಂತಕ್ಕನಿಗೆ ಕಾಫಿಪುಡಿ ಪೊಟ್ಟಣ ತಂದುಕೊಟ್ಟು ಹೋಗುತ್ತಿದ್ದರು.

ಮಲೆನಾಡಿನಲ್ಲಿ ಒಂದೊಮ್ಮೆ ಈ ಕಾಫಿಗೀಫಿ ಬಗ್ಗೆ ಪರಿಚಯವೇ ಇರಲಿಲ್ಲ. ಆರಂಭದ ದಿನಗಳಲ್ಲಿ ಕುನ್ನೇರ್ಲು ಕುಡಿ ಕಷಾಯ, ಕೊತ್ತಂಬರಿ ಬೀಜದ ಕಷಾಯ, ಸೊಗದ ಬೇರಿನ ಕಷಾಯ ಹೀಗೆ ಹಲವಾರು ಕಷಾಯಗಳನ್ನೇ ಕುಡಿಯುವುದು ರೂಢಿಯಲ್ಲಿತ್ತು. ಆದರೆ ಪಾದ್ರಿಗಳು ಕಾಫಿಪುಡಿಯನ್ನು ಅಂತಕ್ಕನ ಮನೆಗೆ ತರ ತೊಡಗಿದ ಮೇಲೆ ಆಕೆ ರುಚಿಕರವಾದ ಕಾಫಿ ಮಾಡುತ್ತಿದ್ದಳು. ಇದರಿಂದ ಆಕರ್ಷಿತರಾದ ಜನ ಮತ್ತೆ ಮತ್ತೆ ಆಕೆಯ ಮನೆಗೆ ಬಂದು ಕಾಫಿ ಕುಡಿಯುವುದು ರೂಢಿಯಾಗಿತ್ತು. ಇದರಿಂದ ಇನ್ನೂ ಮುಂದುವರಿದ ಪಾದ್ರಿಗಳು ತೀರ್ಥಹಳ್ಳಿಯಿಂದ ಬರುವಾಗ ಬೋರ್ಡ್ ಬರೆಸಿ ತರುತ್ತಾರೆ. (ಮ.ಮ. ಪು ೨೯೭) ಈಗ ಅಂತಕ್ಕನ ಮನೆ "ಕಾಫಿ ಹೋಟೆಲ್" ಆಗಿ ಪರಿವರ್ತನೆ ಆಗಿದೆ. ಇದರ ರುಚಿಗೆ ಇಡೀ ಮಲೆನಾಡಿನ ಜನ ಆಕರ್ಷಿತರಾಗಿದ್ದಾರೆ.

ಕಾನೂರು ಹೆಗ್ಗಡತಿ ಕಾದಂಬರಿಯ ಶಾಮಯ್ಯ ಗೌಡರ ಮನೆಯಲ್ಲಿ ಕಾಫಿ ಅದೇ ವೇಳೆಗೆ ಸಹಜವಾದ ವಿಷಯವಾಗಿರುವುದನ್ನೂ ಕಾಣುತ್ತೇವೆ. (ಪು ೨೭ ಕಾ.ಹೆ)

ಒಂದು ಕಾಲದಲ್ಲಿ ಮಲೆನಾಡಿಗೆ ಯಾರಾದರೂ ಅತಿಥಿಗಳು ಬಂದರೆ ಮೊದಲು ಕಾಲು ತೊಳೆಯಲು ನೀರು ಕೊಟ್ಟು ನಂತರ ತಾಂಬೂಲ ನಿವೇದನೆ, ತರುವಾಯ ಹುರಿದ ಮಾಂಸ ಅಥವಾ ಉಪ್ಪು ಮೀನು ಅಥವಾ ಉಪ್ಪಿನಕಾಯಿ ಇತ್ಯಾದಿ ಯಾವುದಾದರೊಂದು ವ್ಯಂಜನದ ಸಮೇತ ಹುಳಿ ಹುಳಿಯಾದ ಹೆಂಡವನ್ನು ಆದರ ಪೂರ್ವಕವಾಗಿ ಕೊಟ್ಟು ಸತ್ಕಾರ ಮಾಡುತ್ತಿದ್ದರು. ಆದರೆ ಇಂದು ಕಾಫಿ ಕುಡಿಯುವುದನ್ನು ನಾಗರಿಕತೆಯ ಚಿಹ್ನೆ ಎಂದೂ ಗೌರವವೆಂದೂ ಭಾವಿಸುತ್ತಿದ್ದಾರೆ. ಇದಕ್ಕೆ ಎರಡೂ ಕಾದಂಬರಿಗಳಲ್ಲೂ ಉದಾಹರಣೆಗಳು ದೊರೆಯುತ್ತವೆ.

**ಮುಸ್ಲಿಮರ ಆಗಮನ**

ಮಲೆನಾಡಿನ ಗ್ರಾಮಪ್ರದೇಶಗಳ ಜನರು ಮುಗ್ಧತೆಯಿಂದ ಪರಸ್ಪರರಲ್ಲಿ ಪ್ರೀತಿ ವಿಶ್ವಾಸ ಸಹಬಾಳ್ವೆಯಿಂದ ಜೀವನ ನಡೆಸುತ್ತಿದ್ದರು. ಭೂಮಾಲಿಕತ್ವವನ್ನು ಉಳಿಸಿಕೊಳ್ಳುವುದು ಮಂಜಯ್ಯ ಭಟ್ಟರಿಗೆ ಹಾಗೂ ಒಕ್ಕಲಿಗರಿಗೆ ಅನಿವಾರ್ಯವಾಗಿತ್ತು. ಇದೇ ಸಂದರ್ಭದಲ್ಲಿ ಶಿವಮೊಗ್ಗದ ಕಡೆಯಿಂದ ಬಂದ ಅಜ್ಜಿಸಾಬು, ಲುಂಗಿಸಾಬು, ಇಜಾರದ ಸಾಬು ಇಂಥವರನ್ನು ಬಾಡಿಗೆ ಬಂಟರಂತೆ ಗೌಡರು, ಬ್ರಾಹ್ಮಣರು ಬಳಸಿಕೊಳ್ಳುತ್ತಿದ್ದರು. ಬಡ ಗೌಡವರ್ಗದವರ ಮೇಲೆ, ಕೆಳವರ್ಗದವರ ಮೇಲೆ ದಬ್ಬಾಳಿಕೆ ನಡೆಸಲು ಈ ಸಾಬಿಗಳ ಬಳಕೆಯಾಗುತ್ತಿತ್ತು. ನಗರದಿಂದ ಬಂದ ಇವರು ಮಲೆನಾಡಿಗರ ಮೇಲೆ ತಮ್ಮ ವರಸೆಗಳನ್ನು ಪ್ರಯೋಗಿಸುತ್ತಿದ್ದರು.

**ಹೊನ್ನಾಳಿ ಹೊಡೆತ:**

ಮಲೆನಾಡಿನ ಹಳ್ಳಿ ಜನರು ಗೌಡರ ಮನೆಯ ಸಾಲ ತೀರಿಸದಾದಾಗ ಮುಸ್ಲಿಮರನ್ನು ಕರೆಸಿ ಬಲವಂತವಾಗಿ ಹೊಡೆಸಿ ಹಿಂಸೆಗೊಳಿಸಿ ಹಣ ವಸೂಲು ಮಾಡುತ್ತಿದ್ದರು. ತಿಮ್ಮಿಯನ್ನು ಗುತ್ತಿ ಕದ್ದೊಯ್ದಾಗ ಸಣ್ಣ ಬೀರನ ಮಗನನ್ನು ಕಂಬಕ್ಕೆ ಕಟ್ಟಿ ಹೊಡೆಸುವ ಶಿಕ್ಷೆಯನ್ನು ಬೆಟ್ಟಳ್ಳಿ ಕಲ್ಲಯ್ಯ ಗೌಡರು ಯಾರು ಈ ಸಾಬಿಗಳಿಂದ ಮಾಡಿಸುತ್ತಾರೆ. (ಮ.ಮ.ಪು. ೩೪೭)

ಇದೇ ಸಂದರ್ಭದಲ್ಲಿ ಇಜಾರದ ಸಾಬು ಮತ್ತು ಪುಟ್ಟಾಚಾರಿಗೆ ನಡೆದ ಘರ್ಷಣೆಯಲ್ಲಿ ಪುಟ್ಟಾಚಾರಿ ಇಜಾರದ ಸಾಬಿಗೆ ಹಿಗ್ಗಾಮುಗ್ಗಾ ಹೊಡೆಯುವುದು ತಮ್ಮತನವನ್ನು ಉಳಿಸಿಕೊಳ್ಳುವ ಪ್ರಯತ್ನದ ಅಂತಿಮಘಟ್ಟವಾಗಿರುತ್ತದೆ.

ಮುಸ್ಲಿಂಮರ ಆಗಮನದಿಂದ ಮಲೆನಾಡಿಗೆ ಕುದುರೆಗಳು ಪ್ರವೇಶ ಮಾಡುತ್ತವೆ. ಜೊತೆ ಜೊತೆಯಲ್ಲೇ ಹಿಂದಿ ಮಿಶ್ರಿತ ಭಾಷೆಯೂ ತಲೆ ಹಾಕುತ್ತವೆ. ಉದಾ: ಹರಾಮ್ ಬಾಂಚೋತ್ (ಪು. 63. ಮ.ಮ.) ಸುವರ್, ಮಾದರ್ ಚೋದ್ ಇತ್ಯಾದಿ ಕೆಟ್ಟ ಪದಗಳು. ಇವೆಲ್ಲ ನಗರದ ಅನಾಗರಿಕ ಮಂದಿಯ ನಡುವೆ ಬಳಕೆಯಲ್ಲಿರುವ ಪದಗಳು. ಸಾಬಿಗಳು ಮಲೆನಾಡನ್ನು ಪ್ರವೇಶಿಸುವ ಹೊತ್ತಿಗೆ ಈ ಭಾಷೆಯೂ ಮಲೆನಾಡಿಗೆ ಬಂತು. ಆಧುನಿಕತೆಯ ಪ್ರವೇಶದ ಜೊತೆಗೆ ಬರುವ ಕೆಟ್ಟ ಚಾಳಿಗಳಿಗೆ ಇವು ಸ್ಪಷ್ಟ ಉದಾಹರಣೆಗಳು.

**ಕರೀಂ ಸಾಬಿ:**

ಮೀನು ಮಾರುವುದಕ್ಕೆಂದು ಘಟ್ಟದ ಮೇಲೇರಿ ಬಂದ ಕರೀಂಸಾಬಿ ಮಲೆನಾಡಿನ ದಲಿತರಿಗೆ ಸಾಲಕೊಡುತ್ತಿದ್ದ. ಇತರರ ಕೈಯಿಂದ ಅಡಿಕೆಯನ್ನೋ ಅಕ್ಕಿಯನ್ನೋ ಪಡೆದು ಬದಲಿಗೆ ಮೀನು ಕೊಟ್ಟು ಹೇಗೆ ವ್ಯಾಪಾರ ಮಾಡುತ್ತಿದ್ದ ಎಂಬುದನ್ನು ಗಮನಿಸಿದರೆ ಬ್ರಿಟೀಷರು ಭಾರತಕ್ಕೆ ಬಂದು ವ್ಯಾಪಾರ ಮಾಡುತ್ತ ತಮ್ಮ ಬೇರುಗಳನ್ನು ಗಟ್ಟಿಗೊಳಿಸಿದ ಬಗೆಯ ಮೈಕ್ರೋಸ್ಕೋಪಿಕ್ ರೂಪವನ್ನಿಲ್ಲಿ ಕಾಣುವುದು ಸಾಧ್ಯ. ಕರೀಂ ಸಾಬಿಯ ಮಾತುಗಳು ಗುತ್ತಿಯಂಥವರಲ್ಲಿ ನಡುಕ ತರುತ್ತದೆ.

ಲಾಂದ್ರ, ಲ್ಯಾಂಪ್, ಲ್ಯಾಟೀನ್‌ಗಳು ಬೆಟ್ಟಳ್ಳಿ ಮನೆಯ ಮುಂದುವರಿಯುತ್ತಿದ್ದ ನಾಗರಿಕತೆಯ ಸಂಕೇತಗಳಾಗಿದ್ದವು. ಆ ಪ್ರಾಂತದ ಉಳಿದ ಶ್ರೀಮಂತರ ಮನೆಗಳಲ್ಲಿ ಇನ್ನೂ ಹರಳೆಣ್ಣೆಯ ಹಣತೆ ಮತ್ತು ಚಿಮಿಣಿ ದೀಪಗಳೇ ಇದ್ದು ಬೆಟ್ಟಳ್ಳಿ ಮನೆಯ ಸುಧಾರಿತ ವಾತಾವರಣವನ್ನು ಇವು ಬೆಳಗುತ್ತಿದ್ದವು.

ಬೆಟ್ಟಳ್ಳಿ ಮನೆಯಲ್ಲಿ ಇತ್ತೀಚೆಗೆ ಪ್ರಚಲಿತವಾಗಿದ್ದ ಕಾಫಿ ಕುಡಿಯುವ ನವ ನಾಗರಿಕ ಚಾಳಿಯನ್ನು ಕುಚೋದ್ಯಮಾಡಿ ಕಲ್ಲಯ್ಯಗೌಡರು ತಾವು ಹಾಲು ಹಾಕಿ ತಯಾರಿಸಿದ ಕುನ್ನೇರಿಲು ಕುಡಿಯ ಕಷಾಯವನ್ನೆ ಕುಡಿದರು.

ಪರಂಪರೆಯ ಜೊತೆಗಿನ ಆಧುನಿಕತೆಯ ಸಂಘರ್ಷವನ್ನಿಲ್ಲಿ ಕಾಣಬಹುದು. ಆ ಬಳಿಕ ಕುನ್ನೇರಿಲು ಕುಡಿಯ ಕಷಾಯ ನವನಾಗರೀಕತೆಯಲ್ಲಿ ಕೊಚ್ಚಿ ಹೋಗಿರಬಹುದು.

# ಅಧ್ಯಾಯ - ೫

## ಸ್ತ್ರೀಯರು

ಕುವೆಂಪುರವರ ಕಾದಂಬರಿಗಳಲ್ಲಿ ಸ್ತ್ರಿಯರ ಸ್ಥಿತಿಗತಿಗಳ ಬಗ್ಗೆ ಆಲೋಚಿಸಿದರೆ ಮನುವಿನ ಧರ್ಮಶಾಸ್ತ್ರವಾದ ಮನುಸ್ಮೃತಿಯ ನೆರಳು ನಮಗೆ ಗೋಚರಿಸುತ್ತದೆ. ಪುರುಷ ಪ್ರಧಾನ ಕುಟುಂಬದಲ್ಲಿ ಇವರು ಸ್ವತಂತ್ರ ಜೀವನದಿಂದ ದೂರವೇ ಉಳಿದಿದ್ದಾರೆ. ಇಲ್ಲಿನ ಹೆಣ್ಣುಗಳೆಲ್ಲ ಮಲೆನಾಡಿನ ವಾತಾವರಣದಲ್ಲೆ ಹುಟ್ಟಿ ಬೆಳೆದು ಇಡೀ ಜೀವನವನ್ನೆಲ್ಲಾ ಅಲ್ಲೆ ಕಳೆದಿದ್ದಾರೆ.

ಮುಖ್ಯವಾಗಿ ಇಲ್ಲಿ ಮೂರು ವರ್ಗದ ಮಹಿಳೆಯರನ್ನು ಕಾಣುತ್ತೇವೆ. ಬ್ರಾಹ್ಮಣ, ಶೂದ್ರ ಮತ್ತು ದಲಿತ ಮಹಿಳೆಯರು. ಇದರಲ್ಲಿ ಗೌಡ ಸಮುದಾಯದ ಹೆಂಗಸರಿಗೆ ವಿಶೇಷ ಸ್ಥಾನಮಾನವಿದೆ. ಎಂದು ಮೇಲ್ನೋಟಕ್ಕೆ ಅನ್ನಿಸಿದರೂ ಪುರುಷ ಸಮಾಜದ ಮುಂದೆ ಅವರು ಗೌಣವಾಗಿಯೇ ಉಳಿಯುತ್ತಾರೆ. ಇವರೆಲ್ಲಾ ಸಂಪ್ರದಾಯದ ಕಟ್ಟುಕಟ್ಟಳೆಯ ಹಿನ್ನೆಲೆಯಲ್ಲೇ ಜೀವನವನ್ನು ಅನುಭವಿಸಿದವರು.

ಇಲ್ಲಿನ ಸ್ತ್ರೀಯರ ಬಗ್ಗೆ ಹೇಳುವಾಗ 'ಹಳೆತಲೆಮಾರಿನ ಹೆಂಗಸರು ಮತ್ತು ನವ ಸಮಾಜದ ಹೊಸ ಕನಸುಗಳನ್ನು ಕಟ್ಟಿಕೊಂಡ ಹೆಣ್ಣುಗಳು' ಎಂದು ಎರಡೂ ಬಗೆಯಾಗಿ 'ಸ್ತ್ರೀ ವಾದಿ ಓದು' ಕೃತಿಯಲ್ಲಿ ಡಾ. ಸುಮಿತ್ರಾ ಬಾಯಿ ಗುರುತಿಸಿದ್ದಾರೆ. ಹಳೆತಲೆಮಾರುಗಳಲ್ಲಿ ಹೂವಯ್ಯನ ತಾಯಿ ನಾಗಮ್ಮ, ಶಾಮಯ್ಯ ಗೌಡರ ಧರ್ಮಪತ್ನಿ ಗೌರಮ್ಮ, ಅಣ್ಣೆ ಗೌಡರ ಹೆಂಡತಿ ಕಾಗಿನಹಳ್ಳಿ ದಾನಮ್ಮ, ಚಿನ್ನಮ್ಮನ ಅಜ್ಜಿ-ಇವರಾರೂ ಗಂಡನ ವಿರುದ್ಧ ಮಾತನಾಡಿದವರಲ್ಲ ಒಂದು ವೇಳೆ ಮಾತನಾಡಿದರೂ ಆ ಮಾತಿಗೆ ಕಿಂಚಿತ್ತೂ ಬೆಲೆ ಇರುತ್ತಿರಲಿಲ್ಲ.

ಇವರೆಲ್ಲ ತಮ್ಮ ಕುಟುಂಬಕ್ಕಾಗಿ, ಸಂಪ್ರದಾಯ, ಆಚಾರ ವಿಚಾರಗಳ ಚೌಕಟ್ಟಿನಲ್ಲೇ ಹಾಗೂ ತಮ್ಮ ಮಕ್ಕಳ ಮೊಮ್ಮಕ್ಕಳ ಗಂಡಂದಿರ ಪೋಷಣೆಯಲ್ಲೆ ಜೀವನ ಕಳೆದವರು. ಇವರೆಲ್ಲರೂ ಮಾನಸಿಕ ಚಿಂತೆ, ಅಸಹಾಯಕತೆಗಳಿಂದ ನೊಂದವರು. ಎಷ್ಟೇ ಬುದ್ಧಿವಂತರಾದರೂ ಒಳ್ಳೆಯ ಗುಣಗಳಿದ್ದರೂ ಗಂಡಸರ ಎದುರು ಶೋಷಣೆಗೆ ಒಳಗಾದವರಾಗಿದ್ದರು. ಹೆಚ್ಚೆಂದರೆ ಚಿನ್ನಮ್ಮನ ಅಜ್ಜಿ ತನ್ನ ಅಳಿಯ ವೆಂಕಟಣ್ಣನನ್ನು ತಿದ್ದಲು

ತನ್ನ ಮನೆಯನ್ನು ತೊರೆದು ಅಳಿಯನ ಮನೆಗೆ ಬಂದು ನೆಳೆಸುತ್ತಾಳೆ. ವೆಂಕಟಣ್ಣನ ದುರ್ಗುಣಗಳನ್ನು ತಿದ್ದುವಲ್ಲಿ ಯಶಸ್ವಿಯಾಗುತ್ತಾಳೆ. ಅಣ್ಣಯ್ಯಗೌಡರ ಹೆಂಡತಿ ತನ್ನ ಹೆಸರನ್ನು ಹೇಳಿಕೊಳ್ಳಲಾರದಷ್ಟು ಕುಬ್ಜ ವ್ಯಕ್ತಿತ್ವ ಉಳ್ಳವಳಾಗಿದ್ದಳು.

ನಾಗಮ್ಮನವರು ಎಷ್ಟೇ ಸೌಜನ್ಯಯುಕ್ತ ವ್ಯಕ್ತಿಯಾದರೂ ಚಂದ್ರಯ್ಯಗೌಡರನ್ನು ಎದುರಿಸಲು ಅವರಿಂದ ಸಾಧ್ಯವಾಗಿರಲಿಲ್ಲ. ಆದರೆ ಹೂವಯ್ಯನ ವ್ಯಕ್ತಿತ್ವ ರೂಪಿಸುವಲ್ಲಿ ಕಟಿಬದ್ಧಳಾಗಿ ನಿಂತು ಯಶಸ್ವಿಯಾಗುತ್ತಾಳೆ. ಸುಮಿತ್ರಾಬಾಯಿಯವರು ಹೇಳುವ ಎರಡನೇ ವರ್ಗದ ಸ್ತ್ರೀಯರಲ್ಲಿ ಸುಬ್ಬಮ್ಮ, ಗಂಗೆ, ಸೀತೆ, ಕಾವೇರಿ, ಲಕ್ಷ್ಮಿ ಹಾಗೂ ಚಿನ್ನಮ್ಮರನ್ನು ಕಾಣಬಹುದು.

ಇಲ್ಲಿನ ಹೆಣ್ಣುಗಳಿಗೆ ಹೊಸ ಸಮಾಜದೊಂದಿಗೆ ಬೆಸೆದುಕೊಳ್ಳಲು ಅವಕಾಶ ಸಿಗದಿದ್ದರೂ ಅದಮ್ಯವಾದ ಆಸೆ ಆಕಾಂಕ್ಷೆಗಳು ಇದ್ದುವು. ನವನಾಗರಿಕ ಸಮಾಜದೊಂದಿಗೆ ತಮ್ಮನ್ನು ತೊಡಗಿಸಿಕೊಳ್ಳುವ ಪ್ರಯತ್ನದಲ್ಲಿ ಎಡವಿದವರೇ ಹೆಚ್ಚು.

ನವೋದಯ ಸಾಹಿತ್ಯದಲ್ಲಿನ ಪಾತ್ರಗಳು ಸಹಜವಾಗಿ ಪ್ರೀತಿ ಪ್ರಣಯ ಕಾಮಕ್ಕೆ ಹಾತೊರೆಯುವುದನ್ನು ಕಾಣುತ್ತೇವೆ. ಸುಬ್ಬಮ್ಮ ಮದುವೆಗೆ ಮುನ್ನ ತನ್ನನ್ನು ಹೂವಯ್ಯನಿಗೆ ಕೊಟ್ಟು ಮದುವೆ ಮಾಡಿಸುತ್ತಾರೆ. ಎಂದುಕೊಂಡು ಗರಿಬಿಚ್ಚಿದ ನವಿಲಿನಂತೆ ಇದ್ದಳು. ಚಂದ್ರಯ್ಯಗೌಡರ ಮೂರನೆ ಹೆಂಡತಿಯಾಗಿ ಬಂದು ಪ್ರೀತಿ, ಕಾಮ ಎರಡರಿಂದಲೂ ವಂಚಿತಳಾಗಿ ಆಕೆ ಜಡ್ಡುಗಟ್ಟಿ ಹೋಗುತ್ತಾಳೆ. ಗಂಡನಿಂದ ಪಡೆಯಲಾರದ ಸುಖವನ್ನು ಸೇರೆಗಾರರಿಂದ ಬಯಸುತ್ತಾಳೆ. ಪರಿಣಾಮವಾಗಿ ಕಳ್ಳ ಬಸಿರಿಗೆ ಕಾರಣವಾಗುತ್ತಾಳೆ. ಜೊತೆಗೆ ಗಂಗೆಯು ಒಡವೆ ಆಸೆಯಿಂದ ಮತ್ತು ಸ್ತ್ರೀ ಮತ್ಸರ ಕಾರಣದಿಂದ ಚಂದ್ರಯ್ಯಗೌಡರನ್ನು ವಶೀಕರಿಸಿ ಸುಬ್ಬಮ್ಮನ ಜೀವನವನ್ನು ದುರಂತಕ್ಕೆ ಒಡ್ಡುತ್ತಾಳೆ.

**ಪ್ರೀತಿ ಪ್ರಣಯ :**

ಸೀತೆ ಅಲ್ಪಸ್ವಲ್ಪ ಶಿಕ್ಷಣ ಕಲಿತು ಹಳ್ಳಿಯಲ್ಲೇ ಇದ್ದರೂ ಸಹಜವಾಗಿಯೇ ಹೂವಯ್ಯನಲ್ಲಿ ಪ್ರೇಮಾಂಕುರಹೊಂದಿ ತನ್ನ ಪ್ರೀತಿಯನ್ನು ವ್ಯಕ್ತಪಡಿಸಲು ಧೈರ್ಯವಿಲ್ಲದೆ ವಿಫಲಳಾಗುತ್ತಾಳೆ. ಇದಕ್ಕೆ ಪೂರಕವಾಗಿ ಪುರೋಹಿತಶಾಹಿಯ ಬಲಾಢ್ಯ ಕೈವಾಡಗಳು ಇವಳ ಜೀವನವನ್ನೇ ಬಲಿತೆಗೆದುಕೊಳ್ಳುತ್ತವೆ. ತನ್ನ ಆಸೆ ಆಕಾಂಕ್ಷೆಗಳನ್ನು ವ್ಯಕ್ತಪಡಿಸುವ ಸಲುವಾಗಿ 'ಹೂವಯ್ಯ

ಭಾವನನ್ನೇ ಮದುವೆಯಾಗುತ್ತೇನೆ' ಎಂದು ಗೋಡೆ ಮೇಲೆ ಬರೆದರೂ (ಕಾ.ಹೆ. ಪು ೧೧೨) ಹೂವಯ್ಯ ಅದನ್ನು ಓದಿದರೂ ಕಾರ್ಯರೂಪಕ್ಕೆ ಬರುವಲ್ಲಿ ಪುರೋಹಿತಶಾಹಿ ವರ್ಗದ ಹಿಡಿತದಿಂದ ಬಿಡಿಸಿಕೊಳ್ಳುವಲ್ಲಿ ವಿಫಲಳಾಗುತ್ತಾಳೆ. ತನ್ನ ಶಿಕ್ಷಣ ಮುಗಿದು ಹೊಸ ಜೀವನ ಆರಂಭವಾಗುವ ಮೊದಲೇ ಹೂವಯ್ಯ ಈ ದುರಂತವನ್ನು ಎದುರಿಸಬೇಕಾಗುತ್ತದೆ. ಬಹುಶಃ ಇವನು ಒಬ್ಬಂಟಿ ಹೋರಾಟಗಾರನಾದ ಕಾರಣ ಇವನ ಆಸೆಗೆ ಪ್ರೋತ್ಸಾಹ, ಬೆಂಬಲ ದೊರೆಯಲಿಲ್ಲ. ಸೀತೆಯನ್ನು ಪಡೆಯುವಲ್ಲಿ ಹೂವಯ್ಯ ಕೊನೆಗೂ ವಿಫಲನಾಗುತ್ತಾನೆ.

'ಮಲೆಗಳಲ್ಲಿ ಮದುಮಗಳು'ವಿನಲ್ಲಿ ಕಾವೇರಿಯು ದೇವಯ್ಯನ ಆಧುನಿಕತೆ ಆಜಾನುಬಾಹು ವ್ಯಕ್ತಿತ್ವ, ನವೀನ ಉಡುಗೆ–ತೊಡುಗೆಗಳಿಗೆ ಮನಸೋತು ಎರಡನೇ ಹೆಂಡತಿಯಾಗಿ ಬರಲು ಸಿದ್ಧಳಾಗಿದ್ದಳು. ಆದರೆ ಮಲೆನಾಡಿಗೆ ಹೊಸದಾಗಿ ಆಗಮಿಸಿದ ಮುಸ್ಲಿಂ ಕರೀಂಸಾಬಿಯ ಹಾಗೂ ಚೀಂಕ್ರನ ಮೋಸಕ್ಕೆ ಒಳಗಾಗಿ ಶವವಾಗಿ ಬಾವಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಇದು ಆಕೆಯ ಅಂತ್ಯದ ದುರಂತ ಜೀವನವಾಗುತ್ತದೆ.

**ಚಿನ್ನಮ್ಮನ ಧೈರ್ಯ:**

ಚಿನ್ನಮ್ಮ ಸೌಂದರ್ಯ ಪ್ರಜ್ಞೆ ಇಲ್ಲದೆ ಬೆಳೆದರೂ ಸಹಜ ಸುಂದರಿಯಾಗಿದ್ದ ಈಕೆ ಮುಕುಂದಯ್ಯನನ್ನು ಪ್ರೇಮಿಸಿ ಇಡೀ ಸಮಾಜವನ್ನು ಧಿಕ್ಕರಿಸಿ ಸುರಿವ ಮಳೆಯಲ್ಲಿ ಅದೂ ಮದುವೆಯ ದಿನವೇ ರಾತ್ರೋ ರಾತ್ರಿ ಮುಕುಂದಯ್ಯನನ್ನು ಬಂದು ಸೇರಲು ಕಾಡು ಮೇಡುಗಳನ್ನು ಹತ್ತಿ ನದಿಯು ಸಾಗರವನ್ನು ಸೇರುವಂತೆ ಮುಕುಂದಯ್ಯನಲ್ಲಿ ಲೀನವಾಗುತ್ತಾಳೆ. ಆ ಕಾಲಕ್ಕೆ ಚಿನ್ನಮ್ಮ ಹಳ್ಳಿಯ ಮುಗ್ಧ ಹುಡುಗಿಯಾದರೂ ಪ್ರೀತಿಸಿದವನನ್ನು ಪಡೆಯಲು ಮುಂದಾಗುತ್ತಾಳೆ. ಪ್ರೀತಿ ಪ್ರಣಯಗಳಿಗೆ ವಿದ್ಯಾವಂತರಲ್ಲದೆ ಗ್ರಾಮೀಣರೂ ಸ್ಪಂದಿಸುತ್ತಿದ್ದ ಬಗ್ಗೆ ಇಲ್ಲಿ ತಿಳಿಯುತ್ತೇವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಸುಬ್ಬಣ್ಣ ಹೆಗ್ಗಡೆಯ ನೆರೆಮನೆಯವರು ಮಗಳಿಗೆ (ಮಂಜಮ್ಮ) ಮದುವೆಯ ವಯಸ್ಸು ಮೀರಿ ಹೋಯಿತೆಂದು ಹೇಳುತ್ತಿದ್ದರೂ ಸುಬ್ಬಣ್ಣ ಹೆಗ್ಗಡೆಯವರಿಗೆ ಹಾಗನ್ನಿಸುತ್ತಿಲ್ಲ. ಮಂಜಮ್ಮ ಸುಪುಷ್ಟವಾಗಿ ಬೆಳೆದಿದ್ದು ಮದುವೆ ವಯಸ್ಸು ಮೀರುವುದೆಂದರೇನು? 'ಅವಳೇನು ಹಾರುವರ ಮನೆಯ ಹೆಣ್ಣೆ? ಮದುವೆ

ಆಗುವುದಕ್ಕೆ ಮೊದಲೇ ದೊಡ್ಡವಳಾಗಿ ಬಿಟ್ಟರೆ ಕಾಡಿಗಟ್ಟಬೇಕೆಂಬ ಹೆದರಿಕೆಯೊ?' ಎಂದು ಸುಬ್ಬಣ್ಣ ಹೆಗ್ಗಡೆ ಹೇಳುವ ಮುಖಾಂತರ ಬ್ರಾಹ್ಮಣ ಸಮಾಜದ ವ್ಯವಸ್ಥೆಯನ್ನು ದೂಷಿಸುತ್ತಾರೆ. ಬ್ರಾಹ್ಮಣರಿಗಿಂತ ಇಂಥ ವಿಷಯಗಳಲ್ಲಿ ಗೌಡರ ಹೆಣ್ಣುಗಳಿಗೆ ಹೆಚ್ಚು ಸ್ವಾತಂತ್ರ್ಯ ಇರುವುದನ್ನು ಕಾಣುತ್ತೇವೆ. ಬ್ರಾಹ್ಮಣರಲ್ಲಿ ಋತುಮತಿ ಆಗುವುದಕ್ಕೆ ಮೊದಲೆ ಮದುವೆ ಮಾಡಿಸುವ ಕ್ರಮವಿದ್ದರೆ ಮಂಜಮ್ಮ ಋತಿಮತಿ ಆಗಿ ಎಷ್ಟು ದಿನ ಇದ್ದರೂ ಗೌಡರಲ್ಲಿ ದೊಡ್ಡ ವಿಷಯವಾಗಿರಲಿಲ್ಲ.

**ಮುಂದಾಲೋಚನೆ:**

ಇಲ್ಲಿನ ಹೆಣ್ಣುಗಳಿಗೆ ಮುಂದಾಲೋಚನೆ ಅಪಾರವಾಗಿದೆ. ಆದರೂ ವ್ಯವಸ್ಥೆಯ ಕೈಗೊಂಬೆಗಳೇ ಮಂಜಮ್ಮ ತನ್ನ ತಂದೆಗೆ 'ಆ ದಡ್ಡೆಮರಿ ನನಗಿರಲಪ್ಪಾ. ಸರಿಪಾಲಿಗೆ ಸಾಕಾಕೆ ಕೊಡ್ತೀನಿ. ಹೊಲೇರ ಗುತ್ತಿ ಸಾಕ್ತಾನೆ' ಎನ್ನುತ್ತಾಳೆ. (ಮ.ಮ.ಪು.೪೭)

ಸ್ತ್ರೀಯರಿಗೆ ಆರ್ಥಿಕ ಚಿಂತನೆ ಇತ್ತೆಂಬುದಕ್ಕೆ ಸಾಕ್ಷಿಯಾಗಿ ಇಲ್ಲಿನ ಮಾತು ಕಾಣಿಸಿಕೊಳ್ಳುತ್ತದೆ. ಇದಕ್ಕೆ ಪೂರಕವಾಗಿ ಚಿನ್ನಮ್ಮ 'ಆ ಹೆಂಟೆ ಮರಿಯನ್ನು ನನ್ನ ಸಮಪಾಲಿಗೆ ಸಾಕಿದ್ದೆ' ಎಂದು ಕೋಳಿಮರಿಯನ್ನು ಮುಕುಂದಯ್ಯನಿಗೆ ತೋರಿಸುತ್ತಾಳೆ. ಕಾನೂರು ಹೆಗ್ಗಡಿತಿ ಕಾದಂಬರಿಯಲ್ಲಿ ಸೀತೆ 'ಹೂವಯ್ಯ ಭಾವನನ್ನೆ ಮದುವೆ ಆಗ್ತೀನಿ' ಎಂದು ತನ್ನ ಆಸೆಯನ್ನು ಗೋಡೆ ಮೇಲೆ ಬರೆಯುವುದು, ಚಿನ್ನಮ್ಮ ಮುಕುಂದಯ್ಯನನ್ನು ಒಪ್ಪಿ ಅವನೊಂದಿಗೆ ರಾತ್ರೋ ರಾತ್ರಿ ಹೋಗುವುದು ನಾಗತ್ತೆಯ ಕೂಡಿಕೆ ಪ್ರಯತ್ನ, ಪೀಂಚಲು ಮತ್ತು ಮುಕುಂದಯ್ಯ ಚಿನ್ನಮ್ಮನ ಫಲಾಯನಕ್ಕೆ ಉಪಾಯ ಮಾಡುವುದು ಇತ್ಯಾದಿಗಳು ಇಲ್ಲಿನ ಹೆಣ್ಣುಗಳು ಎಷ್ಟೆಲ್ಲಾ ಮುಂದಾಲೋಚನೆ ಮಾಡುತ್ತಾರೆ ಎಂಬುದನ್ನು ತಿಳಿಸುತ್ತದೆ. ಆದರೆ ಪುರುಷರಲ್ಲಿ ಇಂಥ ಸೂಕ್ಷ್ಮ ಆಲೋಚನೆಗಳಿಲ್ಲದೆ ಇರುವುದನ್ನು ಕೂಡ ಕೆಲವು ಸಂದರ್ಭಗಳಲ್ಲಿ ಗಮನಿಸಬಹುದು.

**ಕೂಡಿಕೆ :**

ಇದೊಂದು ಮಲೆನಾಡಿನ ಗಂಡಸರ ಕಾಮದ ಆಸೆಯನ್ನು ತೀರಿಸಿಕೊಳ್ಳಲು ಮಾಡಿಕೊಂಡಂತಹ ಒಳಒಪ್ಪಂದ. ಹೆಂಡತಿ ಸತ್ತ ವಿದುರರು, ತೆರ ಕೊಡಲಾರದ ಗಂಡುಗಳು, ಮಕ್ಕಳಾಗದ ಪುರುಷರು, ಗಂಡ ಸತ್ತ ವಿಧವೆಯರನ್ನೋ ಬಡವರ ಮನೆಯ ಹೆಣ್ಣುಗಳನ್ನೋ

ಕೂಡಿಕೆ ಪದ್ಧತಿಗೆ ಒಪ್ಪಿಸಿ ಮದುವೆ ಮಾಡುತ್ತಿದ್ದರು. ನಾಗತ್ತೆ ಇಂಥ ಕೂಡಿಕೆ ಮಾಡಿಕೊಂಡಿದ್ದಳು. ನಾಗಕ್ಕನ ಕೂಡಿಕೆಗೂ ಪ್ರಯತ್ನ ನಡೆಯುತ್ತದೆಯಾದರೂ ಸಂದರ್ಭ ಕೂಡಿಬರುವುದಿಲ್ಲ.

**ಫಲಾಯನ:**

ಕುವೆಂಪು ಕಾದಂಬರಿಗಳಲ್ಲಿ ರೋಮ್ಯಾಂಟಿಕ್ ಸಾಹಿತ್ಯಕ್ಕೆ ಹೆಚ್ಚು ಮನ್ನಣೆ ನೀಡಿದ್ದಾರೆ. ಪ್ರೀತಿ, ಪ್ರೇಮ, ಪ್ರಣಯ, ಕಾಮ, ಇಡೀ ಕಾದಂಬರಿ ಸುತ್ತಲೂ ವ್ಯಾಪಿಸಿಕೊಂಡಿದೆ. ವ್ಯಕ್ತಿಯ ವ್ಯಕ್ತಿತ್ವ ಆದರ್ಶ ಪ್ರೀತಿಗೆ ಸರ್ವವನ್ನೂ ತ್ಯಾಗ ಮಾಡುವ ಶಕ್ತಿ ಇದೆ. ಎಂಬುದನ್ನು ಕಾದಂಬರಿಕಾರರು ನಿರೂಪಿಸಿದ್ದಾರೆ. ನೈಜ ಪ್ರೀತಿಗೆ ಸಾವಿಲ್ಲ. ಆ ಪ್ರೀತಿಯೇ ಜೀವನ ಪ್ರೀತಿಗಾಗಿ ಇರುವಂಥದ್ದು ಎಂಬುದನ್ನು ಕಾದಂಬರಿಗಳ ಪಾತ್ರದ ಮುಖಾಂತರ ಸಾರಿದ್ದಾರೆ.

ಪ್ರೀತಿ, ಪ್ರೇಮಕ್ಕಾಗಿ ಮನಸ್ಸು ಕೊಟ್ಟವರೊಂದಿಗೆ ತನ್ನೆಲ್ಲಾ ಸಂಬಂಧ ಕಳಚಿಕೊಂಡುಹೋಗಲು ಸಿದ್ಧರಿದ್ದ ಪಾತ್ರಗಳು ಇಲ್ಲಿವೆ. ತಿಮ್ಮಿ-ಗುತ್ತಿ ಮುಕುಂದಯ್ಯ-ಚಿನ್ನಮ್ಮರು ಉದಾಹರಣೆಯಾಗಿದ್ದಾರೆ. ಕೆಳವರ್ಗದ ತಿಮ್ಮಿಯ ಅವ್ವ ಸೇಸಿ ತನ್ನ ಮಗಳ ಬಾಳು ಸಹನಾಗಿರಲೆಂದು ತಾನೇ ಬುತ್ತಿಕಟ್ಟಿಕೊಟ್ಟು ಪಲಾಯನಕ್ಕೆ ಸಿದ್ಧತೆ ಮಾಡಿ ಕಳುಹಿಸಿಕೊಡುತ್ತಾಳೆ. ನಂತರ ಬಂದ ಕಷ್ಟ, ನಿಷ್ಠುರಗಳನ್ನು ಧೈರ್ಯದಿಂದ ಎದುರಿಸುತ್ತಾಳೆ. ಹೆಣ್ಣಿನ ಆಸೆ ಆಕಾಂಕ್ಷೆಗಳನ್ನು ಈಡೇರಿಸುವಲ್ಲಿ ಎಷ್ಟೆಲ್ಲಾ ಒಳ್ಳೆಯ ಮನಸ್ಸುಗಳು ಮಿಡಿಯುತ್ತಿವೆ.

**ಅಭ್ಯಂಜನ ಸ್ನಾನ :**

ಕುವೆಂಪುರವರ 'ಮಲೆನಾಡಿನ ಚಿತ್ರಗಳು' 'ಅಣ್ಣಯ್ಯನ ಅಭ್ಯಂಜನ' ಎಂಬ ಸಣ್ಣ ಕಥೆಗಳಲ್ಲಿ ಅಭ್ಯಂಜನ ಸ್ನಾನದ ಅನುಭವಗಳನ್ನು ಸವಿಸ್ತಾರವಾಗಿ ತಿಳಿಸಿದ್ದಾರೆ. ಮೇಲ್ವರ್ಗದ ಗೌಡರಿಂದ ಹಿಡಿದು ಕೆಳವರ್ಗದ ಐತನವರೆಗೆ ಎಲ್ಲರೂ ಇಷ್ಟಪಡುವ ಎಣ್ಣೆಸ್ನಾನ. ಮ.ಮ. ಕಾದಂಬರಿಯಲ್ಲಿ ಐತನ ಎಣ್ಣೆ ಮಜ್ಜನದಲ್ಲಿ ಪೀಂಚಲೂ ಸಹ ಸೇರುತ್ತಾಳೆ. ಪರಸ್ಪರ ಗಂಡ ಹೆಂಡತಿಯರು ಎಣ್ಣೆ ಸವರಿಕೊಂಡು ಅನುರಾಗದ ಸವಿ ಅನುಭವಿಸುತ್ತಾರೆ. ಕೆಳವರ್ಗದ ಜನ ಅಭ್ಯಂಜನ ಮಾಡುವಷ್ಟು ಸ್ವಾತಂತ್ರ್ಯ ಪಡೆದು ಆಧುನಿಕ ಲೌಕಿಕ ಸವಿಯನ್ನು ಅನುಭವಿಸುತ್ತಾರೆ. ಸ್ತ್ರೀಯರೂ ಸಹ ಇದರಿಂದ ಹೊರತಾಗಿರಲಿಲ್ಲ. ದಲಿತರಿಗೂ ಅಭ್ಯಂಜನದ ಸವಿ ಅನುಭವಿಸಲು ಅವಕಾಶವಿದ್ದುದು ಸಂತೋಷದ ವಿಷಯವೇ ಸರಿ.

**ಹಚ್ಚೆ ಹಾಕಿಸಿಕೊಳ್ಳುವುದು:**

ಮಲೆಗಳಲ್ಲಿ ಮದುಮಗಳುವಿನಲ್ಲಿ ದೇವಯ್ಯನ ಹೆಂಡತಿ ದೇವಮ್ಮ ಹಚ್ಚೆ ಹಾಕಿಸಿಕೊಂಡದ್ದನ್ನು ದೇವಯ್ಯ ವಿರೋಧಿಸುತ್ತಾನೆ. ಆದರೆ ಆಕೆ 'ಹಚ್ಚೆ ಗರತಿಯರಿಗೆ ಶ್ರೇಯಸ್ಸು. ಇದು ಶಿವನಜಡೆ (ಮ.ಮ.ಪು೨೧೭)' ಎಂದು ಸಂತೋಷಪಡುತ್ತಾಳೆ. ಅದೇ ಕಾನೂರು ಹೆಗ್ಗಡತಿಯಲ್ಲಿ ಸೀತೆ ಅದು ಅನಾಗರಿಕರು ಹಾಕಿಸಿಕೊಳ್ಳುವುದೆಂದು ಹಚ್ಚೆ ಹುಯ್ಯಿಸಿಕೊಳ್ಳುವುದಿಲ್ಲ. ಆ ಹೊತ್ತಿಗಾಗಲೇ ಹೊಸ ಜನಾಂಗದಲ್ಲಿ ಅದರ ಬಗ್ಗೆ ಆಸಕ್ತಿ ಕಡಿಮೆಯಾಗಿ ನಾಗರಿಕತೆಯನ್ನು ಸೂಚಿಸುತ್ತದೆ.

ಬಹುಶಃ ನಮ್ಮ ಇಂಥ ಸಂಪ್ರದಾಯ ಆಚರಣೆಗಳು ಹೊಸ ಶಿಕ್ಷಣ ನವ ನಾಗರೀಕತೆಯಿಂದ ನಶಿಸುತ್ತವೆ. ಎಂಬುದಕ್ಕೆ ಸಾಕ್ಷಿಯಾಗಿದೆ.

**ಉಂಗುರ:**

ಮ.ಮ. ಕಾದಂಬರಿಯಲ್ಲಿ ಬರುವ ಉಂಗುರದ ಪ್ರಸಂಗ ಕಾವೇರಿಯ ಜೀವನದಲ್ಲಿ ದುರಂತಕ್ಕೀಡು ಮಾಡುತ್ತದೆ. ಈ ಉಂಗುರ ಮೂಲತಃ ಸೋನಗಾರ ದಂಪತಿಗಳ ಉಂಗುರ. ಇದನ್ನು ಕರೀಂ ಸಾಹೇಬರು ಅಪಹರಿಸಿದ್ದರು. ಇದು ಮನುಷ್ಯ ಸ್ವಭಾವದ ಒಳಿತು ಕೆಡುಕುಗಳನ್ನು ಕಥೆಮಾಡಿ ಹೇಳುತ್ತದೆ. ಸೃಷ್ಟಿಯಲ್ಲಿ ಯಾವುದೂ ಆಕಸ್ಮಿಕವಲ್ಲ. ಎಲ್ಲವೂ ಪೂರ್ವ ನಿಯೋಜಿತ ಎಲ್ಲಕ್ಕೂ ಕಾರ್ಯಕಾರಣ ಸಂಬಂಧ ಉಂಟು. ನಮಗದು ಅಗೋಚರವಾಗಿರಬಹುದು. ಪ್ರತಿಯೊಂದಕ್ಕೂ ಒಂದು ಭೂತವಿದೆ. ಅಂತೆಯೇ ಭವಿಷ್ಯವಿದೆ. (ಕು.ಸಾಹಿತ್ಯ ಸಂಧಾನ– ಡಾ. ಸಿ.ಪಿ. ಕೃಷ್ಣಕುಮಾರ್).

ಅದನ್ನು ಪಡೆದಿದ್ದ ಅಕ್ಕಸಾಲಿಯ ದಂಪತಿಗಳು ದುರಂತಕ್ಕೀಡಾದರು. ದಾರಿಗಳ್ಳರಿಂದ ಅದು ಕರೀಂಸಾಬಿಯ ಕೈಗೆ ಬಂದಾಗ ಅವನ ಸಂಸಾರದಲ್ಲಿ ಅನೇಕ ಕಷ್ಟಗಳು ಬಂದಿದ್ದವು. ಬೆಟ್ಟಳ್ಳಿ ಕಲ್ಲಯ್ಯಗೌಡರಿಗೆ ಅದನ್ನು ಸಾಗಿಸಿದಾಗ ಅವರಿಗೆ ಕಷ್ಟಗಳ ಪರಂಪರೆಯೇ ಬಂತು. ಎರಡನೇ ಬಾರಿಗೆ ತನ್ನೆಡೆಗೆ ಬಂದಾಗ ಇಜಾರದ ಸಾಬಿ ದೊಂಬಿಯಲ್ಲಿ ತನ್ನ ಕೈ ಕಡಿಸಿಕೊಂಡಿದ್ದ ಅವನ ತಮ್ಮ ಪುಡಿಸಾಬುವಿಗೆ ಅದು ಸಿಕ್ಕಿದಾಗ ಕಾವೇರಿಯ ಅತ್ಯಾಚಾರಕ್ಕೊಳಗಾಗಿ ದಾರುಣ ದುರಂತಕ್ಕದು ಕಾರಣವಾಗುತ್ತದೆ. ನಂತರ ಆ ಉಂಗುರವನ್ನು ಧರ್ಮಸ್ಥಳದ ಹುಂಡಿಗೆ ಹಾಕುತ್ತಾರೆ.

ಬಸವಪ್ಪ ಶಾಸ್ತ್ರಿಯವರ 'ಕರ್ನಾಟಕ ಶಾಕುಂತಲ'ದಲ್ಲಿ ಉಂಗುರ ಸಮಯಕ್ಕೆ ದೊರಕದೆ ಶಕುಂತಳೆಗೆ ದುರಂತ ಸಂಭವಿಸಿದರೆ ಇಲ್ಲಿ ಉಂಗುರ ಇದ್ದಲ್ಲೆಲ್ಲಾ ಎಷ್ಟು ದುರಂತಗಳು ನಡೆಯುತ್ತಿವೆ. ಇದರ ಮೂಲವೇ ಸುಖವಾಗಿ ಬಂದದ್ದು ಅದರ ಬೆನ್ನ ಹಿಂದೆ ದುರಂತಗಳೂ ಸಂಭವಿಸುತ್ತವೆ.

ಸೀತೆ ಕಾನೂರು ಹೆಗ್ಗಡಿತಿಯಲ್ಲಿ ಬರುವ ಸುಶಿಕ್ಷಿತ ನವನಾಗರಿಕ ಸಿರಿವಂತ ಕುಟುಂಬದ ಹೆಣ್ಣು ನವೋದಯ ಸನ್ನಿವೇಶದ ಪ್ರೀತಿ, ಪ್ರೇಮಕ್ಕೆ ತ್ಯಾಗಕ್ಕೆ ಸಾಕಾರವಾದ ಈಕೆ ವೈಚಾರಿಕ ದೃಷ್ಟಿಯ ಆಧುನಿಕ ಚಿಂತಕಿಯಾಗಿ ಕಾಣುತ್ತಾಳೆ.

ಆಧುನಿಕತೆಗೆ ಎದೆಮಾಡಿದ ಮತ್ತೊಬ್ಬ ಹೆಣ್ಣು ಮಲೆಗಳಲ್ಲಿ ಮದುಮಗಳು ಕಾದಂಬರಿಯ ಪೀಂಚಲು. ಈಕೆ ಇಡೀ ವ್ಯವಸ್ಥೆಯನ್ನು ದಿಕ್ಕರಿಸಿ ಮೇಲ್ವರ್ಗದವರಿಗಾಗಿ ಮದುಮಗಳನ್ನು ಕದ್ದು ಕರೆದೊಯ್ಯುವ ಧೈರ್ಯ ತೋರಿದವಳು ಹುಲಿಕಲ್ ನೆತ್ತಿಯ ಕಗ್ಗತ್ತಲ ಬೆಟ್ಟದಲ್ಲಿ, ಸುರಿವ ಮಳೆಯಲ್ಲಿ, ಗರ್ಭಿಣಿ ಸ್ತ್ರೀಯಾದರೂ ಧೈರ್ಯದಿಂದ ಕಾಡನ್ನು ಏರಿ ಹೋಗುತ್ತಾಳೆ. ಸ್ತ್ರೀಯರ ಶೋಷಣೆಯಲ್ಲಿ ಮೇಲ್ವರ್ಗದ ಮತ್ತು ಕೆಳವರ್ಗದ ಹೆಂಗಸರೆಂಬ ವ್ಯತ್ಯಾಸವಿಲ್ಲ.

ಕುವೆಂಪುರವರು ತಮ್ಮ ಕಾದಂಬರಿಗಳಲ್ಲಿ ಉತ್ತಮವಾದ ಮಾದರಿಗಳನ್ನು ಸೃಷ್ಟಿಸಿದ್ದಾರೆ. ಕಾಗಿನೂರಿನ ಅಮ್ಮ ದಾನಮ್ಮ ಹೆಗ್ಗಡಿತಿ ಮುತ್ತಳ್ಳಿಯ ಗೌರಮ್ಮ ಚಿನ್ನಮ್ಮನ ಅಜ್ಜಿ ಈ ಸ್ತರದ ವ್ಯಕ್ತಿಗಳು. ಇವರಲ್ಲಿ ಮಾತೃಸಹಜ ಭಾವನೆಯಿದೆ. ಅನ್ಯಾಯವನ್ನು ವಿರೋಧಿಸುವ ವ್ಯವಸ್ಥೆಗೆ ಹೊಂದಿಕೊಳ್ಳುವ ಹೊಸ ಜನಾಂಗವನ್ನು ಕೊಂಡೊಯ್ಯುವ ವಿಕಾಸ ತತ್ವಗಳ ಶಕ್ತಿ ಇವರಲ್ಲಿದೆ. ಎಂದು ಡಾ। ಬಿ.ಎಸ್. ಸುಮಿತ್ರಾ ಬಾಯಿ ಅವರು ಗುರುತಿಸಿದ್ದಾರೆ, (ಕು.ಕಾ. ಗಳಲ್ಲಿ ಸ್ತ್ರೀ ಓದು) ಆದರೆ ಇವರು ಈ ಗುಂಪಿಗೆ ಸೇಸಿಯನ್ನು ಸೇರಿಸದೇ ಇದ್ದದ್ದು ವಿಷಾದನೀಯ ಎನಿಸುತ್ತದೆ. ಮಾತೃ ಹೃದಯ ಮಿಡಿವ ಕಣ್ಣೀರ ಕೋಡಿಯನ್ನು ಹರಿಸುವ, ಒಡೆಯನಿಗೆ ಶಿರಸಾಷ್ಟಾಂಗ ಎರಗಿ ಮಗನಿಗಾಗಿ ಹಂಬಲಿಸುವ ಈಕೆಯನ್ನು ಈ ಸಾಲಿಗೆ ತರಬೇಕಿತ್ತು.

ಸ್ತ್ರೀ ಶೋಷಣೆ ಅನುಮಾನ ಸಹಜವಾದದ್ದು. ಕಾವೇರಿ, ಸುಬ್ಬಮ್ಮ, ಪೀಂಚಲು, ಗಂಡಸರಿಂದ ನೇರವಾಗಿ ಶೋಷಿಸಲ್ಪಡುತ್ತಾರೆ. ಆದರೆ ದೇವಮ್ಮ ತನ್ನ ಗಂಡ ದೇವಯ್ಯ ಅನ್ಯ ಸ್ತ್ರೀ ಸಂಪರ್ಕವಿಟ್ಟುಕೊಂಡರೂ ಚಿಂತಿಸುವುದಿಲ್ಲ ಬದಲಿಗೆ ಗಂಡ ಮತಾಂತರವಾಗುವುದಕ್ಕೆ ಹೆದರುತ್ತಾಳೆ. ಇದೊಂದು ಹೊಸರೀತಿಯ ಸಮಸ್ಯೆ. ಈಕೆ ಅದನ್ನು ಎದುರಿಸುವಲ್ಲಿ ವಿಫಲಳಾಗುತ್ತಾಳೆ. ಸೀತೆ ಒಂದು ರೀತಿ ಬಂಡಾಯ ಪ್ರವೃತ್ತಿ ಹೆಣ್ಣು ಎಂದು ಸುಮಿತ್ರಬಾಯಿ ಗುರುತಿಸಿರುವುದು ಸಮಂಜಸವಲ್ಲ. ಅವಳು ಒಲಿದವನನ್ನು ಸೇರುವ ತವಕದಕಲ್ಲಿದ್ದಳು. ಆಕೆಗೆ ರಾಮಯ್ಯನೊಂದಿಗೆ ಈ ಜೀವನವೇ ಬೇಡವಾಗಿತ್ತು. ಆದರೂ ಸೀತೆ ಮದುವೆ ವಿಷಯದಲ್ಲಿ ವಿಫಲಳಾಗುತ್ತಾಳೆ. ಸೀತೆಯ ಕನಸೂ ನುಚ್ಚುನೂರಾಗುತ್ತದೆ.

# ಅಧ್ಯಾಯ - ೬

# ಅಸ್ಪೃಶ್ಯತೆ

## ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ

ಕುವೆಂಪುರವರ ಕಾದಂಬರಿಗಳಲ್ಲಿ ಕಾಣಿಸುವ ಪ್ರಕೃತಿ ಸಹಜವಾದ ಜೀವನವೆಂದರೆ ದಲಿತ ಜೀವನ. ಈ ಕಾದಂಬರಿಗಳಲ್ಲಿ ಬರುವ ದಲಿತರೆಂದರೆ ಹಳೆಪೈಕದವರು, ಹಸಲೇರರು, ಹೊಲೆಯರು, ಕುಂಬಾರರು, ಬಿಲ್ಲವರು ಹಾಗೂ ಇತರ ಅಸ್ಪೃಶ್ಯರು. ಈ ಎಲ್ಲ ಜನಾಂಗದವರಿಗೆ ವೃತ್ತಿ ಕಸುಬಾಗಲಿ, ಕುಲಕಸುಬಾಗಲೀ ಇಲ್ಲಿ ಮುಖ್ಯವಾಗುವುದಿಲ್ಲ. ಎಲ್ಲರೂ ಜಮೀನ್ದಾರರ ತೋಟಗದ್ದೆಗಳಲ್ಲಿ ಶ್ರಮವಹಿಸಿ ದುಡಿಯುತ್ತಿದ್ದವರೇ ಆಗಿದ್ದರು.

ಇವರ ಭಾವನೆಗಳು ಹೆಚ್ಚಾಗಿ ಕಮರಿದ ಬೆಂಕಿಯಾಗಿತ್ತು. ಜಮೀನ್ದಾರರ ಜಮೀನಿನಲ್ಲಿ ಕೂಲಿಮಾಡುವ ಇವರ ಒಳಮನಸ್ಸು ಸ್ವಾತಂತ್ರ್ಯ, ಸಹಬಾಳ್ವೆ, ಸಮಾನತೆ ಹಾಗೂ ಮೂಲಭೂತ ಆವಶ್ಯಕತೆಗಳನ್ನು ಈಡೇರಿಸಿಕೊಳ್ಳುವಲ್ಲಿ ಸೋತುಹೋಗಿದೆ. ಇವರು ಬದುಕಿದ್ದೂ ಅಷ್ಟಕ್ಕೇ ಎಂದು ಅನ್ನಿಸವಷ್ಟು ಕಾದಂಬರಿಯಲ್ಲಿ ಕಂಡರೂ ಸಹಕಾರ ಮನೋಭಾವಕ್ಕೆ ಹೇಳಿ ಮಾಡಿಸಿದ ವರ್ಗವಾಗಿತ್ತದು. ಮಾತ್ರವಲ್ಲದೆ ಸಹಕಾರದ ಇನ್ನೊಂದು ಮುಖ ಅಸಹಾಯಕತೆಯೂ ಆಗಿರುವುದರಿಂದ ಅಸಹಾಯಕರಾದ ದಲಿತರು ಜಮೀನ್ದಾರರಿಗೆ ಸಹಕಾರ ಕೊಡದಿರುವುದು ಸಾಧ್ಯವಿರಲಿಲ್ಲ ಆದರೂ ಬಂಡಾಯದ ಕೆಲವು ಅಂಶಗಳು ಕಾದಂಬರಿಗಳಲ್ಲಿ ಕಾಣಬರುತ್ತವೆ.

ನಂಜ ಹೂವಯ್ಯನೊಂದಿಗೆ ಮುತ್ತಳ್ಳಿಗೆ ಹೋಗುವಾಗ 'ಬಾಯಾರಿಕೆ' ಎಂದು ಸುಳ್ಳು ಹೇಳಿ ಹೋಗಿ ಕುಡಿದು ಬರುತ್ತಾನೆ. ಬೀಳುತ್ತ ಏಳುತ್ತ ಬರುತ್ತಿದ್ದನ್ನು ಕಂಡು ಶ್ಯಾಮಯ್ಯ ಗೌಡ್ರು ಇವನಿಂದ ಉಳಿಗಾಲವಿಲ್ಲ ಎಲ್ಲಿ ಹೋದ್ರೂ ಕೊಂಬು ಹುಯ್ಲೆ ಎಂದು ಬಯ್ಯುತ್ತಾರೆ.

ಅಸ್ಪೃಶ್ಯತೆ ಎಂಬುದು ಸಮಾಜಕ್ಕಂಟಿದ ಕಳಂಕ, ಜಾತಿಯನ್ನೆ ಆಧಾರವಾಗಿಟ್ಟುಕೊಂಡು ಬಂಡವಾಳಶಾಹಿಗಳು, ಪುರೋಹಿತಶಾಹಿಗಳು ನಿರಂತರವಾಗಿ ಈ ದಲಿತ ಸಮಾಜವನ್ನು ಶೋಷಿಸುತ್ತಲೇ ಬಂದಿದೆ. ಶೋಷಣೆ ಎಂಬುದೂ ಈ ಸಮಾಕ್ಕಂಟಿದ ಶಾಪ. ಇಲ್ಲಿನ ಕೆಳವರ್ಗದ ಜನ ಸಾಮಾಜಿಕವಾಗಿ, ಆರ್ಥಿಕವಾಗಿ, ನೈತಿಕವಾಗಿ ಶೋಷಣೆಗೆ ಒಳಗಾದವರೇ ಆಗಿದ್ದಾರೆ. ಕುವೆಂಪುರವರು ಶೋಷಣೆಗೊಳಗಾಗುವ ಜನಗಳ ಪರವಾಗಿ ನಿಂತು ಸಾಹಿತ್ಯದ ಮುಖಾಂತರ ಅವರ ಉದ್ದಾರಕ್ಕಾಗಿ ಕಂಕಣಬದ್ದರಾಗಿ ನಿಂತರು ಎಲ್ಲೆಲ್ಲಿ ಶೋಷಣೆಗೆ

ಒಳಗಾಗುತ್ತಾರೆ, ಎಂಬುದನ್ನು ಸಚಿತ್ರಣ ಸಮೇತವಾಗಿ ತಮ್ಮ ಸಾಹಿತ್ಯದಲ್ಲಿ ಅದರಲ್ಲೂ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಮಲೆಗಳಲ್ಲಿ ಮದುಮಗಳಲ್ಲಿ ಬರುವ ಹೊಲೆಯರ ನಾಯಿಗುತ್ತಿಯ ವ್ಯಕ್ತಿತ್ವ, ಧೈರ್ಯ ಹಾಗೂ ಮಾನಸಿಕ ಸ್ಥೈರ್ಯಗಳನ್ನು ಕಾದಂಬರಿಕಾರರು ಸೆರೆಹಿಡಿಯುವ ಬಗೆ ವಿನೂತನವಾದುದು. ಮರಾಠಿ ಮಂಜನ ಮೂಲಕ ಆತನ ವ್ಯಕ್ತಿತ್ವವನ್ನು ಪರಿಚಯಿಸುವ ಕ್ರಮ ಹೀಗಿದೆ:

ಸಿಂಬಾವಿ ಭರಮೈ ಹೆಗ್ಗಡೆಯವರ ದೊಡ್ಡಚೌಕಿನ ಮನೆ ಹೆಬ್ಬಾಗಿಲು ದಾಟಿದ ಅವರ ಜೀತದಾಳು ಹೊಲೆಯರ ನಾಯಿಗುತ್ತಿ ಅಂಗಳದ ಕಡೆಯ ಮೆಟ್ಟಿಲಲ್ಲಿ ನಿಂತು ಆಕಾಶದ ಕಡೆಗೆ ಬಿಡುಗಣ್ಣಾಗಿ ನೋಡುತ್ತಿದ್ದನು. ಹವಾಮಾನ ಪರಿವೀಕ್ಷಣೆ ಹಾಗೂ ಅವನ ಬದಲಾವಣೆಗೊಂಡಿರುವ ವೇಷ, ಅಡಿಗೆಯ ಮರಾಠಿ ಮಂಜನ ಗಮನ ಸೆಳೆಯುತ್ತದೆ. "ಏನೋ ಗುತ್ತಿ, ಮುಗಿಲಕಡೆ ನೋಡ್ತಾ ನಿಂತೆ? ದೂರಾ? ಒಳ್ಳೆ ದಬರೊದಸ್ತಾಗಿದ್ದೀಯಲ್ಲ!".

ಸೊಂಟಕ್ಕೆ ಸುತ್ತಿದ್ದ ಮೋಟು ಪಂಚೆ ವಿನಾ ಬತ್ತಲೆಯಾಗಿದ್ದ ಮರಾಠಿಯವನ ಮುಂದೆ ಹೊಲೆಯನ ಕೊಳೆ ಸರ್ವವ್ಯಾಪಿಯಾಗಿದ್ದರೂ ಷೋಕಿಯಾಗಿದ್ದನು. ತಲೆಗೆ ಒಂದು ಕೆಂಪುವಸ್ತ್ರ ಸುತ್ತಿದ್ದನು. ಮೈಗೊಂದು ಅಂಗಿ ಹಾಕಿದ್ದನು. ಪಂಚೆಯ ತುದಿ ಮೊಣಕಾಲನ್ನು ದಾಟಿತ್ತು. ಕಿವಿಗೆ ಒಂಟಿ ಬೇರೆ; ಒಂಟಿಗಳನ್ನು ಹೊಸದಾಗಿ ಹಾಕಿರಲಿಲ್ಲವಾದರೂ ಹೊಸವೇಷದಿಂದ ಅವುಗಳಿಗೊಂದು ಷೋಕಿ ಬಂದಿತ್ತು. ಎಲ್ಲಕ್ಕೂ ತಿಲಕಪ್ರಾಯವಾಗಿ ಮುಖಕ್ಷೌರ, ಹೊಲೆಯನಾದರೂ ಬೆಳ್ಳಗಿದ್ದುದರಿಂದ ಮಲೆಯನಂತೆ ಕಾಣುತ್ತಿದ್ದನು. ಹೆಗಲ ಮೇಲೆ ಮಡಿಸಿ ಹಾಕಿಕೊಂಡಿದ್ದ ಕಂಬಳಿ ಕೊಪ್ಪೆ ಅವನು ಮಳೆಗೆ ತಯಾರಾಗಿ ಹೊರಟಿದ್ದನ್ನು ಸೂಚಿಸುತ್ತಿತ್ತು. ಬಗಲಲ್ಲಿ ಇರುಕಿಕೊಂಡಿದ್ದ ಬಗನಿ ಮರದ ಕರಿಯ ದೊಣ್ಣೆ ಹೊಡೆದಾಟಕ್ಕೂ ಕೂಡ ಅವನು ಸಿದ್ದನಾಗಿದ್ದಾನೆ ಎಂಬುದನ್ನೂ ಸೂಚಿಸುತ್ತಿದ್ದವು" (ಮ.ಮ. ಪು ೧೨೭).

ಒಟ್ಟಾರೆ ಗುತ್ತಿ ಹೊಸ ವರಸೆ, ಹೊಸಬಣ್ಣಗಳಿಂದ ಉನ್ನತ ಸ್ತರಕ್ಕೇರಿದವನಂತೆ ಕಾಣುತ್ತಿದ್ದನು. ಅವನ ಸಿದ್ಧತೆ ಮಳೆಗಾಳಿಗಷ್ಟೇ ಅಲ್ಲ; ತನ್ನ ತಿಮ್ಮಿಯನ್ನು ಹಾರಿಸಿಕೊಂಡು ಬರುವುದಕ್ಕೂ ಆಗಿತ್ತು. ಹೊರಟಿದ್ದಾನೆ. ಎಷ್ಟೇ ಕಷ್ಟಗಳು ಎದುರಾದರೂ ಎಲ್ಲವನ್ನೂ ಎದುರಿಸುವ ಧೈರ್ಯದಿಂದಲೇ ಆತ ಸಿದ್ಧನಾಗಿದ್ದಾನೆ.

ಚಿನ್ನಮ್ಮ ತನ್ನ ಪ್ರೀತಿಯನ್ನು ಉಳಿಸಿಕೊಳ್ಳಲು ರಾತ್ರೋ ರಾತ್ರಿ ಮದುವೆ ಮಂಟಪದಿಂದ ಓಡಿ ಹೋಗಿ ಮುಕುಂದಯ್ಯನನ್ನು ಸೇರುವಂತೆ, ಗುತ್ತಿಯೂ ತನ್ನ ಪ್ರೇಯಸಿ ತಿಮ್ಮಿಯನ್ನು ಹಾರಿಸಿಕೊಂಡು ಹೋಗುವುದು ವಿಶೇಷ. ಒಬ್ಬ ಹೊಲೆಯ, ಜೀತದಾಳು ಗುತ್ತಿ ಎಂತಹ ಸಾಹಸಕ್ಕೆ ಕೈ ಹಾಕಿದ್ದಾನೆ. ಬೇರೆ ಜಮೀನ್ದಾರರ ಆಳುಗಳನ್ನು ಪ್ರೀತಿಸುವುದು, ಮದುವೆಯಾಗುವುದು ಕೂಡ ಅಪರಾಧವಾಗಿದ್ದ ಆ ಕಾಲದಲ್ಲಿ ಗುತ್ತಿ ತೋರಿಸಿದ ಎದೆಗಾರಿಕೆ ಮೆಚ್ಚತಕ್ಕ ಅಂಶ.

ಅಂದಿನ ಮಲೆನಾಡಿನ ಸಾಮಾಜಿಕ ಜೀವನ ಹೊರಜಗತ್ತಿನ ವಿದ್ಯಮಾನಗಳಿಗೆ ಎಷ್ಟು ದೂರವಾಗಿತ್ತು ಎಂಬುದಕ್ಕೆ ಮಲೆಗಳಲ್ಲಿ ಮದುಮಗಳು ಕಾದಂಬರಿಯ ಒಂದು ಸನ್ನಿವೇಶವನ್ನು ಗಮನಿಸಬಹುದು. ಪೋಲೀಸರಿಂದ ತಪ್ಪಿಸಿಕೊಂಡ ಗುತ್ತಿಗೆ ಕಾಡಿನಲ್ಲಿಯೂ ದಾರಿತಪ್ಪಿತು. ಅಲ್ಲಿ ಬರೀ ಹಲಸಿನ ಹಣ್ಣು ತಿಂದೇ ಹಸಿವು ನೀಗಿಸಿಕೊಳ್ಳುತ್ತಾನೆ. ಕಾಗಿನಹಳ್ಳಿಗೆ ಬಂದು ತಲುಪಿದಾಗ ತಾನು ಪೋಲೀಸರಿಂದ ತಪ್ಪಿಸಿಕೊಂಡು ಬಂದ ವಿಚಾರ ಇವರಿಗೇನಾದರೂ ತಿಳಿದಿದೆಯೇ? ಎಂದು ಯೋಚಿಸುತ್ತಾನೆ ಎಂಬ ಎಲ್.ಸಿ. ಸುಮಿತ್ರಾರವರ ಹೇಳಿಕೆ ಗಮನಿಸಿದರೆ ಗುತ್ತಿ ಆ ಮಲೆನಾಡಿಗೆ ಎಷ್ಟು ಹೊಂದಿಕೊಂಡಿದ್ದ ಎಂಬುದು ಮನವರಿಕೆಯಾಗುತ್ತದೆ. ಪಟ್ಟಣದ ಪೋಲೀಸ್ ಎಂಬ ಭಯಾನಕ ಪದದ ಅರ್ಥ ಅವನನ್ನು ದಿಗಿಲು ಹುಟ್ಟಿಸಿತ್ತು. ಆದರೂ ತನ್ನ ಮಲೆನಾಡಿನಲ್ಲಿ ತಾನು ಯಾವುದಕ್ಕೂ ಜಗ್ಗುವವನಲ್ಲ. ಬಾಹ್ಯಲೋಕದ ಪರಿಚಯವಿಲ್ಲದಿದ್ದರೂ ಗುತ್ತಿ ಮುಕುಂದಯ್ಯನ ಸಹವಾಸದಿಂದ ಅನೇಕ ವಿಚಾರಗಳನ್ನು ತಿಳಿಯಬಲ್ಲವನಾಗಿದ್ದ. ಆತನ ಗ್ರಹಣ ಶಕ್ತಿಗೆ ಆಧುನಿಕ ವಿದ್ಯಾಭ್ಯಾಸ ದೊರಕಲಿಲ್ಲವೆಂಬುದಷ್ಟೇ ಕೊರತೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಶೂದ್ರರಲ್ಲಿ ಮೇಲ್‌ಸ್ತರದವರಾದ ಒಕ್ಕಲಿಗ ಭೂಮಾಲೀಕರು ಮತ್ತು ಶೂದ್ರರಲ್ಲಿ ಕೆಳಸ್ತರದವರಾದ ಅಸ್ಪೃಶ್ಯ ದುಡಿಯುವ ವರ್ಗದ ಅರ್ಥಾತ್ ಜೀತದಾಳುಗಳ ನಡುವಿನ ಅಂತರ ಮತ್ತು ಘರ್ಷಣೆಗಳು ಪ್ರಕಟಗೊಳ್ಳುತ್ತವೆ. ಲುಂಗಿಸಾಬು, ಅಜ್ಜಿಸಾಬು, ಇಜಾರದ ಸಾಬು ಮುಂತಾದ ಮನುಷ್ಯತ್ವವಿಲ್ಲದ ಜನರನ್ನು ಬೆನ್ನಿಗಿಟ್ಟುಕೊಂಡು ಅವರ ಮೂಲಕ ತಪ್ಪು ಮಾಡಿದ ಅಥವಾ ಬಂಡೆದ್ದ ಜೀತದಾಳುಗಳನ್ನು ಶಿಕ್ಷಿಸುತ್ತಿದ್ದ ರೀತಿ ಮನಮಿಡಿಯುತ್ತದೆ. 'ಸಣ್ಣಬೀರ'ನಿಗೆ ಸಾಬು ಹೊಡೆಯುವ ಪ್ರಸಂಗ ಹೃದಯ ವಿದ್ರಾವಕ ಇದಕ್ಕೆ ಪ್ರತಿಯಾಗಿ ಗುತ್ತಿ ಮುಂದೊಂದು ದಿನ ಸಾಬುವಿನ ಮೇಲೆ ಹಲ್ಲೆ ಮಾಡಿ ತನ್ನ ಪ್ರತಿಭಟನೆ ತೋರುತ್ತಾನೆ. ಇಲ್ಲಿ ಬರುವ ಕಣ್ಣ

ಪಂಡಿತರು ಹುಡುಗಿಯನ್ನು ಒಲಿಸಿಕೊಳ್ಳಲು ಗುತ್ತಿಗೆ ತಾಯಿತಕೊಡುತ್ತಾನೆ. ಅವನ ಪ್ರತಿಸ್ಪರ್ಧಿಯಾದ ಬಚ್ಚನಿಗೂ ತಾಯಿತ ಕೊಡುತ್ತಾನೆ. ಇದನ್ನು ವ್ಯಂಗ್ಯವಾಗಿ ಗುತ್ತಿಯ ಜೊತೆ ಹೇಳಿ ನಗುವಾಗಿನ ತಿಮ್ಮಿಯ ಧ್ವನಿ ಈ ತಾಯಿತಗಳ ನಿರುಪಯುಕ್ತತೆಯನ್ನು ಪ್ರಕಟಿಸುತ್ತದೆ.

ಗುತ್ತಿಯ ಆಡನ್ನು ಸಾಬರು ಕದ್ದು ಕಾಡಿನಲ್ಲಿ ಕೊಯ್ದು ತಿಂದಾಗ ಸಣ್ಣಬೀರ ಪ್ರತೀಕಾರದ ಕಿಡಿಯಾಗುತ್ತಾನೆ. (ಮ.ಮ. ಪು. ೩೯೮) "ಅವರ ಪಚ್ಚೀನೂ ಹೀಗೇ ತೆಗೀಬೇಕು. ಭಾವ, ಬಿಡಬಾರ್ದು. ಇವತ್ತು ಏನೇ ಆಗಲೀ.... ಥ್ಫೋ" ಎಂದು ಶಪಿಸುತ್ತಾನೆ. ಸಾಬರ ವಿರುದ್ಧ ಜಗಳವಾಡಿ ಸೇಡು ತೀರಿಸಿಕೊಳ್ಳುವ ಮೂಲಕ ಪ್ರತಿಭಟನೆಯ ಸಂಕೇತವಾಗುತ್ತಾನೆ. (ಬಿ.ಕೃಷ್ಣಪ್ಪ ಕು.ಕಾ.ದ.ಜಿ) "ತಮ್ಮ ವ್ಯವಸ್ಥೆಯ ಮೇಲೆ ಅನ್ಯರ ಆಕ್ರಮಣ ದಬ್ಬಾಳಿಕೆಯನ್ನು ಸಹಿಸುವುದು ಮೂರ್ಖತನವಾಗುತ್ತದೆ" ಎಂಬ ಬಂಡಾಯದ ಅಂಶಗಳನ್ನು ಸಣ್ಣಬೀರನ ಮಾತುಗಳಲ್ಲಿ ಕಾಣುತ್ತೇವೆ.

ಪಟ್ಟಣದಿಂದ ವಿದ್ಯಾಭ್ಯಾಸ ಮುಗಿಸಿ ಬಂದ ರಾಮಯ್ಯ ಹೂವಯ್ಯ ಗದ್ದೆ ಉಳಲು ಹೋಗಿದ್ದಾಗ ರಾಮಯ್ಯ ಹಿಡಿದ ನೇಗಿಲ ಎತ್ತು ಬಿಳಿವಸ್ತ್ರ ನೋಡಿ ಬೆದರಿ ಎಳೆದುಕೊಂಡು ಹೋಗಿ ದೊಡ್ಡದೊಂದು ಬದುವನ್ನು ಹಾರುವಾಗ ರಾಮಯ್ಯ ನೇಗಿಲನ್ನು ಎತ್ತರದ ಬದುವಿಗೆ ಅಡ್ಡಹಿಡಿಯುತ್ತಾನೆ. ಪರಿಣಾಮವಾಗಿ ನೇಗಿಲ ಈಚು ಮುರಿದುಹೋಗುತ್ತದೆ. (ಕಾ.ಹೆ. ಪು. ೧೮೪) ಇದರಿಂದ ಕ್ರೋದಗೊಂಡ ಗೌಡರು ಬೈರನಿಗೆ ಪಡಿಕೊಡದಂತೆ ಸೇರೆಗಾರರಿಗೆ ಅಪ್ಪಣೆ ಮಾಡುತ್ತಾರೆ. ಬೈರ ತನ್ನ ಸಂಕಟವನ್ನು ಸಿದ್ದನಲ್ಲಿ ತೋಡಿಕೊಳ್ಳುತ್ತಾನೆ. ಆಗ ಸಿದ್ದ "ಗೌಡರ ಕೇಳ್ಕೊಂಡು ಬನ್ನಿ ಹೊಟ್ಟೆಗಿಲ್ದೆ ಮಲಗನೇನು ರಾತ್ರಿ" ಎಂದು ಗೌಡರ ವಿರುದ್ದ ಬಂಡೇಳುತ್ತಾನೆ. ಸಿದ್ದ ಹಸಿವಿನ ತೀವ್ರತೆ ಅರಿತವನು. ಹಸಿವು ಎಂಥವರನ್ನು ರೊಚ್ಚಿಗೆಬ್ಬಿಸಿಬಿಡುತ್ತದೆ. ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತಾನೆ. ಗೌಡರು ಸೇರೆಗಾರನನ್ನು ನ್ಯಾಯಕ್ಕಾಗಿ ಆಗ್ರಹ ಪಡಿಸುತ್ತಾನೆ. ಭೂಮಾಲೀಕನ ಕ್ರೌರ್ಯ ಹಾಗೂ ದುಡಿವ ವರ್ಗದ ದಯನೀಯ ಸ್ಥಿತಿಯ ಚಿತ್ರಣ ಕಾಣುತ್ತೇವೆ. ಎಂದು ರಹಮತ್ ತರೀಕೆರೆಯವರು ಅಭಿಪ್ರಾಯ ಪಡುತ್ತಾರೆ. (ಲೇಖಕನ ಸಂಯಮ ಪು. ೨೭)

ಇಲ್ಲಿಯ ಕೆಳವರ್ಗದವರಿಗೆ ಮದುವೆ ಮೆರೆವಣಿಗೆಯಲ್ಲಿ ಗೌಡರ ಸಮಾನವಾದ ದಂಡಿಗೆಯಲ್ಲಿ ಹೋಗುವುದಕ್ಕೆ ನಿಷೇಧವನ್ನು ಸರ್ಕಾರದ ಮಟ್ಟದಲ್ಲೆ ಹೇರಲಾಗಿತ್ತು. ಅದರ ಹಿಂದೆ ಗೌಡರ ಸಾರ್ವಭೌಮತ್ವವೂ ಕಾರಣವಾಗಿರುತ್ತದೆ. ಆದರೂ ಸೇಸನಾಯಕ

"ನಮ್ಮ ಕುದುರೆ, ನಮ್ಮ ದಂಡಿಗೆ ನಮ್ಮ ವಾದ್ಯ, ನಮ್ಮ ಬೋವಿಗಳು, ನಮ್ಮ ದುಡ್ಡು, ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ?" (ಮ.ಮ. ಪು. ೧೩) ಎನ್ನುವಷ್ಟು ಬೆಳೆದಿದ್ದನು. ಇಲ್ಲಿ ದಲಿತರ ಬಂಡಾಯಧ್ವನಿ ಎದ್ದು ಕಾಣುತ್ತದೆ.

ಗುತ್ತಿ ತನ್ನ ಮದುವೆ ವಿಷಯದಲ್ಲಿ ತಿಮ್ಮಿಯನ್ನು ಪಡೆಯಲು ಪೂರ್ಣ ಸ್ವಾತಂತ್ರ್ಯವಿಲ್ಲದೆ ಇದ್ದಾಗ ಇಡೀ ತನ್ನ ಜಾತಿಯನ್ನೆ ನಿಂದನೆ ಮಾಡಿಕೊಳ್ಳುತ್ತಾನೆ. ರೀತಿ ಡಾ. ಸಿದ್ಧಲಿಂಗಯ್ಯ ತಮ್ಮ 'ಏಕಲವ್ಯ' ನಾಟಕದಲ್ಲಿ "ಏಕಲವ್ಯ ದ್ರೋಣರ ಬಳಿ ವಿದ್ಯೆ ಕಲಿಯಬೇಕೆಂಬ ಆಸೆಯಿಂದ ಹಸ್ತಿನಾವತಿಗೆ ಹೋಗಿ ಜಾತಿ ಅಪಮಾನಕ್ಕೆ ಪಕ್ಕಾಗಿ ಮರಳಿ ಬರುತ್ತಾನೆ. ಬರುವಾಗ ತನ್ನ ಜಾತಿಯ ಬಗ್ಗೆ ನಿಂದೆ ಅಪಮಾನ ಸಹಿಸಲಾರದೆ ಆ ಜಾತಿಯಲ್ಲಿ ಹುಟ್ಟಿದ್ದಕ್ಕಾಗಿ ಧಿಕ್ಕಾರ ಕೂಗುತ್ತಾನೆ." ಎಷ್ಟೇ ಪ್ರತಿಭೆ ಇದ್ದರೂ ಅದಕ್ಕೆ ಪೋಷಣೆ ಇಲ್ಲದಾಗ ಆ ಪ್ರತಿಭೆ ಸೊರಗಿ ಹೋಗುತ್ತದೆ. ನಿಸ್ಸಹಾಯಕ ಸ್ಥಿತಿಗೆ ತಲುಪುತ್ತಾರೆ. ಎಂಬುದಕ್ಕೆ ಏಕಲವ್ಯ ಹೇಗೆ ಉದಾಹರಣೆ ಆಗುತ್ತಾನೋ ಕುವೆಂಪುರವರ ಗುತ್ತಿಯೂ ಹಾಗೆಯೇ ಉದಾಹರಣೆಯಾಗುತ್ತದೆ.

**ಒಡೆತನ (ಅಸ್ತಿತ್ವ)**

ಕುವೆಂಪುರವರ ಕಾದಂಬರಿಗಳಲ್ಲಿ ದಲಿತ ಪಾತ್ರಗಳು ಸಾಮಾನ್ಯವಾಗಿ ತಮ್ಮ ಅಸ್ಥಿತ್ವಕ್ಕಾಗಿ ಹೆಣ್ಣು, ಹೆಂಡ, ಮಾಂಸಕ್ಕಾಗಿ ಹೋರಾಡುವುದನ್ನು ಕಾಣುತ್ತೇವೆ.

ಬಗಿನಿ ಮರಕ್ಕೆ ಕಳ್ಳು ಕಟ್ಟುವುದು ಬೈರನ ಕುಲ ಕಸುಬು. ಆದರೆ ಬೇರಾರೋ ಬಂದು ಕಟ್ಟಿದ್ದರು. ಕುಲಕಸುಬು ಬರುವ ತಾನಲ್ಲದೆ ಬೇರಾರೋ ಕಟ್ಟಿದ್ದಾರೆಂದು ಭಾವಿಸಿ ಅನ್ವೇಷಣೆ ಮಾಡಲು ಸಿದ್ಧನಾಗಿ ಮಾರ್ಕನ ಮೇಲೆ ಅನುಮಾನ ಪಡುತ್ತಾನೆ. ಇಲ್ಲಿ ವೃತ್ತಿ ಕಸುಬನ್ನು ಉಳಿಸಿಕೊಳ್ಳಲು ಪಡುವ ಕಷ್ಟ, ತನ್ನದನ್ನು ಬೇರಾರೂ ಅಪಹರಿಸಬಾರದೆಂಬ ಛಲವನ್ನು ಕಾಣುತ್ತೇವೆ.

ಕುವೆಂಪುರವರ ಕಾದಂಬರಿಗಳಲ್ಲಿ ಎಲ್ಲ ದಲಿತರೂ ಸಾಲಗಾರರಾಗಿರುತ್ತಿದ್ದರು. ಆದರೆ ಸೇಸನಾಯ್ಕನಂಥವರು ಅಪರೂಪಕ್ಕೆ ಗೇಣಿಗಾರರಾದರೂ ಸ್ವಂತಿಕೆ ಉಳಿಸಿಕೊಂಡವರೂ ಆಗಿ ಕಂಡು ಬರುತ್ತಾರೆ. ಇವರು ಸ್ವಂತ ಆಸ್ತಿಯನ್ನು ಹೊಂದುವುದು ಮಹಾಪರಾಧ. ಇದು ವ್ಯವಸ್ಥೆಯ ಬಿಗಿಹಿಡಿತದಿಂದ ತಪ್ಪಿಸಿಕೊಳ್ಳಲಾಗದ ಸನ್ನಿವೇಶ. ಕಾರಂತರ ಕಾದಂಬರಿ "ಚೋಮನದುಡಿಯಲ್ಲಿ ಚೋಮನಿಗೆ ಎಷ್ಟೇ ಆಸೆ ಆಕಾಂಕ್ಷೆಗಳಿದ್ದರೂ ಸ್ವಂತ ಜಮೀನು ಹೊಂದುವಲ್ಲಿ ಆತ ವಿಫಲನಾಗುತ್ತಾನೆ." ಬ್ರಾಹ್ಮಣಶಾಹಿಯ ಬಿಗಿಹಿಡಿತದಿಂದ ತಪ್ಪಿಸಿಕೊಳ್ಳಲು

ಅವನಿಗೆ ಸಾಧ್ಯವಾಗುವುದಿಲ್ಲ. ಹಾಗಾಗಿ 'ಇವರ' ಎಲ್ಲ ಆಸೆಗಳೂ ಆಸೆಗಳಾಗಿಯೇ ಉಳಿಯುತ್ತವೆ. ಇಲ್ಲಿ ವ್ಯವಸ್ಥೆಯ ವಿರೋಧ ಹಾಗೂ ಹೊಸ ಬದುಕಿನ ಬಗ್ಗೆ ಇದ್ದ ಆಸೆಯನ್ನು ಕಾಣುತ್ತೇವೆ.

ಕಮ್ಯೂನಿಸಂ ಕಲ್ಪನೆಯ ವರ್ಗ ಸಂಘರ್ಷವೆಂದರೆ ಖಾಸಗಿ ಆಸ್ತಿ ಇಲ್ಲವಾಗುವ ಮೂಲಕ ಸಮಾನತೆಯು ಸ್ಥಾಪಿತವಾಗುವುದು. ಕಾ.ಹೆ. ಕಾದಂಬರಿಯಲ್ಲಿ ಚಂದ್ರಯ್ಯ ಗೌಡರ ನಾಯಿ ಮರಿ 'ರೂಬಿ'ಯನ್ನು ಹಾಳು ಕೋಳಿ ಕಣ್ಣು ಕುಕ್ಕಿ ಗಾಯಮಾಡುತ್ತದೆ. ಅದನ್ನು ತಾನು ಸಾಕಿಕೊಳ್ಳುತ್ತೇನೆಂದು ತಿಮ್ಮ ಕೇಳಿದರೂ ಗೌಡರು ಸಾಕಲು ಅವಕಾಶ ನೀಡುವುದಿಲ್ಲ. ದಲಿತನಿಗೆ ಒಡೆತನದ ಹಕ್ಕಿಲ್ಲ ಎಂಬುದನ್ನು ಪ್ರಾಥಮಿಕ ಉದಾಹರಣೆಯಲ್ಲೇ ಪ್ರಕಟಪಡಿಸುತ್ತಾರೆ. ಒಡೆತನವನ್ನು ಪಡೆಯುವ ಕುರಿತಾದ ಪ್ರಯತ್ನ ನಡೆಯುತ್ತದೆ. ಆದರೂ ತಮ್ಮ ನಿಸ್ಸಹಾಯಕತೆಯನ್ನು ಅನುಭವಿಸುತ್ತಾನೆ.

ಕಾ.ಹೆ. ಕಾದಂಬರಿಯಲ್ಲಿ 'ಟೈಗರ್' ಎಂಬ ನಾಯಿ ಸತ್ತಾಗ ಪುಟ್ಟಣ್ಣ ಪ್ರೀತಿಯಿಂದ ಪುಟ್ಟಣ್ಣ ತನ್ನ ಸಾದಾರಣ ಪಂಚೆಯನ್ನೆ ಸುತ್ತಿ ನಾಯಿಯನ್ನು ಮಣ್ಣು ಮಾಡುವಾಗ 'ನನಗಾದ್ರೂ ಕೊಟ್ಟಿದ್ದರೆ ಆ ಪಂಚೆಯನ್ನು' ಎಂದು ಬೈರ ನಾಯಿಯ ಹೆಣದ ಪಂಚೆಗೆ ಹಾತೊರೆಯುತ್ತಾನೆ.

ಕುಂ. ವೀರಭದ್ರಪ್ಪನವರ 'ದೇವರ ಹೆಣ' ಎಂಬ ಕಥೆಯಲ್ಲಿ ಠೊಣ್ಣಿ 'ಅನ್ನ' ಎಂಬ ಶಬ್ದ ಕೇಳಿದಾಗ ಆಹಾ ಹಾ ಎಂದು ಹಾತೊರೆಯುವ ದೇವರ ಹೆಣಕ್ಕೆ ಆಸೆಪಡುವ ವಿದ್ಯಮಾನ ಇರುವುದನ್ನು ಗಮನಿಸಬಹುದು. ಇಲ್ಲಿ ಬಾಳ್ವೆಗಾಗಿ ಹೋರಾಟದ ಬದುಕನ್ನು ಕಟ್ಟಿಕೊಳ್ಳುವ ಆಸೆ ಆತನಲ್ಲಿ ಅತುಳವಾಗಿದೆ.

ಕಾದಂಬರಿಯಲ್ಲಿ ಬರುವ ದಲಿತರಿಗೆ ಮಾಂಸವೆಂದರೆ ಎಲ್ಲಿಲ್ಲದ ಆಸಕ್ತಿ. ಮೊದಲನೆಯದು ಹಸಿವಿನ ಸಂಕಟ ನಿವಾರಣೆ, ಎರಡನೆಯದು (ಸ್ವಂತ) ಹಣಕೊಟ್ಟು ಮಾಂಸ ತಿನ್ನಲಾಗದ ಸನ್ನಿವೇಶ, "ದೊಡ್ಡ ಅಯ್ನೋರು ಹೇಳಿದ್ರು, ಹಂದಿ ಹಸಿವಿಗೆ ಯಾರಾದ್ರೂ ಇಬ್ಬರನ್ನ ಕಳಿಸಬೇಕಂತೆ (ಮ.ಮ. ಪು. ೧೦೯) ಎಂದು ಹೋವಿ ಹೇಳಿದ ಮಾತು ಕೇಳಿ ಎಲ್ಲರೂ ಯಾರು ಹಂದಿ ಹೊಡೆದದ್ದು?' ಎಂದು ಪ್ರಶ್ನಿಸಿದರು. ನಂಗೊತ್ತಿಲ್ಲ ಹೇಳಿ ಬರಾಕೆ ಹೇಳಿದ್ರು ಎಂದು ಹೇಳಿ ಪೊದೆಗಳಲ್ಲಿ ಮರೆಯಾಗುತ್ತಾಳೆ. ಆದರೆ ಇಲ್ಲಿ ಹೊಲೆಯರೂ ಗೌಡರ ಮನೆಮುಂದೆ ಜಮಾಯಿಸಿದ್ದು ನೋಡಿ 'ಯಾರು ಸತ್ರು ಅಂತ

ಬಂದಿರೋ?' ಆ ವೆಂಕಟಣ್ಣನಿಗೆ ಒಂದು ಸಲಗ ಹಿಡಿದುಕೊಡಲು ಇಬ್ಬರನ್ನು ಬರ ಹೇಳಿದರೆ ಎಂದು ಗೋಣಗಿ ಎಲ್ಲರಿಗೂ ಗದ್ದೆ ತೋಟಕ್ಕೆ ಹೋಗಲು ಹೇಳಿದಾಗ ಎಲ್ಲರೂ ಸಬೂಬು ಹೇಳಿ ಮನೆ ಕಡೆ ಹೊರಡುತ್ತಾರೆ. ಇಲ್ಲಿ ಮಾಂಸದ ಮೇಲಿನ ಆಸೆ ವ್ಯಕ್ತವಾಗುತ್ತದೆ. ಹೊಸತೇನಾದರೂ ದೊರೆತರೆ ಅದನ್ನು ಪಡೆಯುವ ಹಂಬಲ ಅವರಲ್ಲಿ ಅದಮ್ಯವಾಗಿದೆ. ಹೂವಯ್ಯನ ಹೋತ ಬಲೀಂದ್ರನನ್ನು ಅಪಹರಿಸಲು ಗಂಗೆ ಮತ್ತು ಸೇರೆಗಾರರು ಸೋಮನನ್ನು ಪುಸಲಾಯಿಸಿ ಕಳುಹಿಸುತ್ತಾರೆ. ಇಲ್ಲಿ ಸೋಮನಿಗೂ ಇದ್ದದ್ದು ಮಾಂಸದ ಆಸೆಯೇ. ಅದಕ್ಕಾಗಿ ಎಂಥ ನೋವು, ಹಿಂದೆಯನ್ನಾದರೂ ಸಹಿಸುತ್ತಾನೆ. ಆದರೂ ಕೊನೆಗೆ ಆ ಕಾರ್ಯದಲ್ಲಿ ವಿಫಲನಾಗುತ್ತಾನೆ.

ಬೈರ ಕಾಯಿಲೆಯಿಂದ ಮಲಗಿದ್ದರೂ 'ಬಾಯಿಸಪ್ಪೆಯಾಗಿದೆ, ಮೀನು ಕೊಡು' ಎಂದು ಸೋಮನನ್ನು ಕೇಳಿ ಬೇಡಿ ಒಂದು ಏಡಿಯನ್ನು ಪಡೆದು ತಿನ್ನುತ್ತಾನೆ. ಹಳ್ಳಿಯ ಬದುಕಿನಲ್ಲೂ ಬಾಯಿರುಚಿಗೆ ಕೊರತೆಯಿಲ್ಲ. ಹೊಸ ಹೊಸರೂಪದ ಅಡಿಗೆ, ಮಾಂಸಾಹಾರ ಇತ್ಯಾದಿಗಳು ಸಮಾಜದ ಉಳ್ಳವರದ್ದಷ್ಟೇ ಅಲ್ಲ; ಇಲ್ಲದವರ ಹಕ್ಕೂ ಕೂಡ. ಅದನ್ನು ಪಡೆಯುವ ಅವರ ಆಸೆ ಅದಮ್ಯವಾಗಿದೆ ಎಂಬುದನ್ನು ಎರಡೂ ಕಾದಂಬರಿಗಳ ಹಲವು ಸಂದರ್ಭಗಳಲ್ಲಿ ವಿವರಿಸಲಾಗಿದೆ.

ಪಟ್ಟಭದ್ರಹಿತಾಸಕ್ತಿಗೆ ಒಳಗಾಗಿ ಪುರೋಹಿತಶಾಹಿಯ ಕೈಗೊಂಬೆಯಾದ ಅನೇಕ ಘಟನೆಗಳು ಈ ಕಾದಂಬರಿಗಳಲ್ಲಿ ಪ್ರಕಟಗೊಂಡಿವೆ. ಬಿ.ಕೃಷ್ಣಪ್ಪನವರು ತಮ್ಮ ಕು.ಕಾ. ದ.ಜೀ ಎಂಬ ಲೇಖನದಲ್ಲಿ ಈ ಸಮಾಜದ ಶೋಷಣೆಯನ್ನು ಬ್ರಾಹ್ಮಣ, ಶೂದ್ರ, ದಲಿತ ಎಂದು ಮೂರು ವರ್ಗಗಳಾಗಿ ವಿಂಗಡಿಸುತ್ತಾರೆ. ಬ್ರಾಹ್ಮಣ ಶೂದ್ರನನ್ನು ಶೋಷಿಸಿದರೆ ಶೂದ್ರ ದಲಿತರನ್ನು ಶೋಷಿಸುವುದನ್ನು ಒಪ್ಪಿಕೊಳ್ಳಬೇಕಾಗಿದೆ.

ಎಲ್ಲಿಯವರೆಗೆ ಮೌಢ್ಯತೆಗಳಿರುತ್ತವೆಯೋ, ಅಲ್ಲಿಯವರೆಗೆ ಶೋಷಣೆಗಳೂ ಇರುತ್ತದೆ. ಮೌಢ್ಯವಂತರನ್ನು ಶೋಷಿಸುವುದು ವಿದ್ಯಾವಂತರಾದ ಮೇಲ್ವರ್ಗದವರಿಗೆ ಸುಲಭದ ಮಾರ್ಗವಾಗಿತ್ತು. ಇದಕ್ಕೆ ಪ್ರತಿರೂಪವೆಂಬಂತೆ ಧರ್ಮಸ್ಥಳ, ತಿರುಪತಿಯಂತಹ ದೇವಾಲಯಗಳ ಸಂಬಂಧ. ಈ ಸಂಬಂಧಕ್ಕೆ ಭಯದಿಂದ ಕೂಡಿದ ಭಕ್ತಿಯೂ ಕಾರಣ. ಕೆಳವರ್ಗದ ಶೂದ್ರ, ದಲಿತರಂತೂ ಭೂತ, ದೆವ್ವ, ಜಕ್ಕಣಿ, ಪಂಜುರ್ಲಿಗಳಿಗೆ ತುಂಬಾ ವಿಧೇಯರಾಗಿ ನಡೆದುಕೊಳ್ಳುತ್ತಾರೆ.

ವಾಸು, ಗಂಗ, ಪುಟ್ಟರು ಹಕ್ಕಿಮರಿ ನೋಡಲು ಗೂಡಿನ ಬಳಿ ಹೋಗುತ್ತಾರೆ. ಆದರೆ ಹಕ್ಕಿ ಗೂಡಿನಲ್ಲಿರುವುದಿಲ್ಲ. ವಾಸು ಕದ್ದವರನ್ನು ಶಪಿಸುತ್ತಾನೆ. ಗಂಗನನ್ನೂ ಕೇಳುತ್ತಾನೆ. ಗಂಗ ನನಗೆ ಗೊತ್ತಿಲ್ಲ ಪುಟ್ಟನೇನಾದರೂ ಬಂದಿರಬಹುದೆಂದು ಅವನ ಗಮನವನ್ನು ಬೇರೆಡೆಗೆ ಸೆಳೆಯುತ್ತಾನೆ. (ಕಾ.ಹೆ. ಪು.ಸಂ. ೬೭) ಪುನಃ ಬೆಳಗ್ಗೆ ಎದ್ದ ತಕ್ಷಣ ಗಂಗನ ಮನೆಗೆ ಬಂದ ವಾಸುವಿಗೆ ಎದುರಾದದ್ದು ಸೇಸಿ ಹೊರಗೆ ಬಂದು ಒಂದು ಹಕ್ಕಿಯನ್ನೂ ಎರಡು ಮರಿಗಳನ್ನೂ ಗಂಗನ ಕಾಲುಬುಡಕ್ಕೆ ಎಸೆದ ದೃಶ್ಯ. ಇವು ಗಂಗನ ಕಳ್ಳತನಕ್ಕೆ ಸಾಕ್ಷಿಯಾದ ಪಿಕಳಾರದ ಮರಿಗಳು. ಇಲ್ಲಿ ಒಬ್ಬರನ್ನೊಬ್ಬರು ಮುಟ್ಟಲು ಅಸ್ಪೃಶ್ಯತೆ ಅಡ್ಡಬಂದರೂ ಸ್ನೇಹಕ್ಕೆ ಅಡ್ಡಿ ಬಂದಿಲ್ಲ.

ವಾಸುವಿಗೆ ಬೇಲರವನನ್ನು ಮುಟ್ಟಬಾರದೆಂದು ಗೊತ್ತಿದ್ದರೂ ಬೇಲರವನಾದ ಗಂಗನ ಮೈಗೆ ಗುದ್ದಿ ಮನೆಗೆ ಹೋಗಿ ಸೆಗಣಿಯನ್ನು ಮೆಟ್ಟಿ ಹಿತ್ತಲ ಬಾಗಿಲಿನಿಂದ ಮನೆ ಪ್ರವೇಶಿಸುತ್ತಾನೆ. ವಾಸುವಿಗೆ ಪ್ರಕೃತಿಯ ಹಕ್ಕಿ ಪಕ್ಷಿಗಳ ಬಗ್ಗೆ ಇದ್ದ ಕಾಳಜಿ ಒಂದೆಡೆಯಾದರೆ ತನ್ನ ಜಾತಿಯ ಘನತೆ ಗೌರವಗಳನ್ನು ಕಾಪಾಡಿಕೊಳ್ಳುವ ಹುಂಬ ಆದರ್ಶ ಇನ್ನೊಂದು ಕಡೆ. ಒಂದು ವರ್ಗ ಇನ್ನೊಂದು ವರ್ಗವನ್ನು ಶೋಷಣೆ ಮಾಡುವುದಕ್ಕೆ ಇದು ಸ್ಪಷ್ಟ ಉದಾಹರಣೆಯಾಗಿದೆ.

ಇತರ ಪ್ರದೇಶಗಳಂತೆಯೇ ಮಲನಾಡಿನಲ್ಲೂ ಜಾತೀಯತೆಯ ಪಿಡುಗು ಅನಾದಿಕಾಲದಿಂದ ನೆಲೆಗೊಂಡಿತ್ತು ಎಂಬುದಕ್ಕೆ ಇಲ್ಲಿನ ಹಲವಾರು ಘಟನೆಗಳು ಸಾಕ್ಷಿ ಹೇಳುತ್ತವೆ.

**ಸರಕುಗಳು:**

ದಕ್ಷಿಣ ಆಫ್ರಿಕಾದ ಕರಿಯರನ್ನು ಅಮೇರಿಕ ದೇಶದಲ್ಲಿ ಮಾರಾಟ ಮಾಡುತ್ತಿದ್ದ ಸಂಗತಿ ಕೇಳಿದ್ದೇವೆ. ಅದೇ ರೀತಿ ಮಲೆನಾಡಿನ ಯಜಮಾನರು ದಲಿತ ಆಳುಗಳನ್ನು ಹಂಚಿ ಕೊಳ್ಳುತ್ತಿದ್ದರು.

ಮ.ಮ. ಕಾದಂಬರಿಯಲ್ಲಿ ಚಿನ್ನಮ್ಮನ ಮದುವೆಯಲ್ಲಿ ಹೊಲೆಯರ ಮಂಜ, ಸಿದ್ಧ, ಬೈರ, ವಾಲಗ ಊದುತ್ತಿದ್ದರು. ಆ ಬಗ್ಗೆ ಗೌಡರ ಮನೆಯ ಕಾಡು ತಿಮ್ಮು, ಧರ್ಮ ಮುಂತಾದ ಹುಡುಗರು ಆಡಿಕೊಳ್ಳುವ ಮಾತು ಗಮನಾರ್ಹ. ಭೈರನಿಗೆ ಮದುವೆಯ ಓಲಗ ಊದುವುದು ಹೆಮ್ಮೆಯ ವಿಷಯವಾಗಿರುತ್ತದೆ. ಇಲ್ಲಿ ದಲಿತರಿಗೆ ಇಂಥ ಒಂದು ಅವಕಾಶ ದೊರೆತದ್ದು ಸಂತಸವೇ ಸರಿ. ಆದರೆ "ತಮ್ಮ ಗೌಡಿಕೆಯ ಗೌರವಕ್ಕೆ ಮಸಿ

ಬಳಿದಂತಾಗಿ ಬನ್ರೋ ಬನ್ರೋ ಈ ಬಾಡು ತಿನ್ನೋರ ವಾಲಗ ಏನು ಕೇಳೋದು ಎಂದು ಧರ್ಮ ಜಿಗುಪ್ಸೆಯಿಂದ ಹೊರಟು ಹೋಗುತ್ತಾನೆ.

ಇಲ್ಲಿ ಗೌಡರು ಬ್ರಾಹ್ಮಣರಿಂದ ಶೋಷಿತರಾದರೆ, ದಲಿತರು ಗೌಡರಿಂದ ಶೋಷಿತರಾಗುತ್ತಾರೆ. ಒಕ್ಕಲಿಗರು ಅಥವಾ ಗೌಡರು ಭೂಮಾಲಿಕರು ತಮ್ಮನ್ನು ಬಿಟ್ಟು ಅನ್ಯರು ಭೂಮಾಲಿಕರಾಗಕೂಡದೆಂದು ಇವರ ತಗಾದೆ. ತಮ್ಮ ಇಚ್ಚೆಗೆ ವಿರುದ್ಧವಾಗಿ ಭೂ ಸಾಗುವಳಿ ಮಾಡ ಹೊರಟ ಹಳೆ ಪೈಕದ ಸೇಸ ನಾಯ್ಕನ ಮೇಲೆ ಅವರಿಗೆ ಜಿದ್ದು.

ಇಲ್ಲಿನ ದಲಿತರು ಕೇವಲ ಬ್ರಾಹ್ಮಣರು ಶೂದ್ರರಿಂದ ಮಾತ್ರ ಶೋಷಣೆಗೆ ಒಳಗಾಗುತ್ತಿರಲಿಲ್ಲ. ಇತ್ತೀಚೆಗೆ ಮಲೆನಾಡಿಗೆ ಕಾಲಿಟ್ಟ ಮುಸ್ಲಿಂರಿಂದಲೂ ಶೋಷಣೆಗೆ ಒಳಗಾಗುತ್ತಿದ್ದರು. ಅವರು ಕೊಡುವ ಕರ್ಜೂರ, ಸಕ್ಕರೆ ಪಾಕ, ಮುಂತಾದ ವಸ್ತುಗಳಿಗಾಗಿ ಮನೆಯಲ್ಲಿ ಬೆಳೆದ ಅಡಿಕೆ, ತೆಂಗು, ಕಾಳುಮೆಣಸು, ಕಾಫಿಬೀಜ, ಇವುಗಳನ್ನು ಸಿಕ್ಕಷ್ಟು ಹಣಕ್ಕೆ ಮಾರಿ ತಮ್ಮ ಬಾಯಿ ಚಪಲ ತೀರಿಸಿಕೊಳ್ಳುತ್ತಿದ್ದರು. ಉದಾಹರಣೆಗೆ ಮ.ಮ. ಕಾದಂಬರಿಯ ಮಂಜಮ್ಮ ಕೆಳವರ್ಗದ ಗಂಗ, ಪುಟ್ಟರು ನೇರ ಶೋಷಣೆಗೆ ಒಳಗಾದವರು. ಅವರು ಹೊಸ ವಸ್ತುಗಳನ್ನು ತಿಂದು ಅನುಭವಿಸಿ ಸುಖ ಪಡೆಯುವುದನ್ನು ಕಾಣಬಹುದು.

ಕಲ್ಲೂರು ಮಂಜಯ್ಯ ಭಟ್ಟರ ಮನೆಯ ಸತ್ಯನಾರಾಯಣ ಪೂಜೆಯ ಬಳಿಕ ಊಟದ ಪ್ರಸಂಗದಲ್ಲಿ (ಮ.ಮ. ಪು ೪೪೬) ಬ್ರಾಹ್ಮಣರು ಗೌಡರನ್ನು ಜಗಲಿಯಲ್ಲಿ ಕುಳ್ಳಿರಿಸಿ ಊಟ ಹಾಕುತ್ತಾರೆ. ಅದೇ ರೀತಿ ಶೂದ್ರರು ದಲಿತರನ್ನು ಹೊರಗೆ ಕುಳ್ಳಿರಿಸಿ ಊಟ ಹಾಕುತ್ತಾರೆ. ಇಲ್ಲಿ ಬ್ರಾಹ್ಮಣರು ಶೂದ್ರರನ್ನು ಶೋಷಿಸಿದರೆ ಶೂದ್ರರು ಇಡೀ ಕಾದಂಬರಿಯಲ್ಲಿ ದಲಿತರನ್ನು ಶೋಷಿಸುತ್ತಲೇ ಹೋಗುತ್ತಾರೆ. ಅಸ್ಪೃಶ್ಯತೆಗೆ ಅಂತ್ಯವೆಲ್ಲಿ?

ಇಲ್ಲಿ ಮಕ್ಕಳು ಆ ಊಟದ ವ್ಯವಸ್ಥೆಯ ಬಗ್ಗೆ ಮಾತನಾಡುತ್ತಾರೆ. ಕುವೆಂಪುರವರ ಸಮಾನತೆ ಸ್ವಾತಂತ್ರ್ಯ, ಸಹಬಾಳ್ವೆಗಳ ಬಗ್ಗೆ ಅವರ ಚಿಂತನಾಲಹರಿ ಹರಿಯುತ್ತದೆ.

ಮ.ಮ. ಕಾದಂಬರಿಯಲ್ಲಿ ಆಳುಗಳೆಲ್ಲಾ ದೋಣಿಯಲ್ಲಿ ಕುಳಿತುಕೊಂಡಾಗ ಸತ್ಯನಾರಾಯಣ ವ್ರತಕ್ಕೆಂದು ಭಟ್ಟರು ತಡವಾಗಿ ಬರುತ್ತಾರೆ. ದೋಣಿಯಲ್ಲಿನ ಆಳುಗಳನ್ನೆಲ್ಲಾ "ಜನಿವಾರದವರು ಹತ್ತುತ್ತಾರೋ ಇಳಿರೋ ಎಲ್ಲ" ಎಂದು ಅಂಬಿಗ ತಮ್ಮಯ್ಯಣ್ಣ ಆಜ್ಞೆ ಮಾಡುತ್ತಾನೆ. ಇಲ್ಲಿ ಕೆಳವರ್ಗದವರನ್ನು ನಡೆಸಿಕೊಳ್ಳುವ ಬಲಾಢ್ಯ ವ್ಯವಸ್ಥೆಯನ್ನು ಕುವೆಂಪುರವರು ಗುರುತಿಸುತ್ತಾರೆ. ಇಂಥವರ ಕಲ್ಯಾಣಕ್ಕಾಗಿ ಇಡೀ ಕಾದಂಬರಿಯಲ್ಲಿ ಶೋಷಣಾ ಚಿತ್ರಣಗಳನ್ನು ಎಳೆ ಎಳೆಯಾಗಿ ಬಿಡಿಸಿ ಹೇಳಲಾಗಿದೆ. ತನ್ಮೂಲಕ ಶೋಷಣೆಯನ್ನು ವಿರೋಧಿಸುವವರ ಬಣ ಹೆಚ್ಚಬೇಕೆಂಬುದು ಅವರ ಅಭಿಪ್ರಾಯವಾಗಿತ್ತು.

**ಲೈಂಗಿಕತೆ :**

ಕೆಳವರ್ಗದಲ್ಲೆ ಅನೇಕ ಸ್ತರದ ಜಾತಿಯ ಜನರು ಮ.ಮ. ಕಾದಂಬರಿಯಲ್ಲಿ ಕಾಣುತ್ತಾರೆ. ಹಸಲರು ಹೊಲೆಯರು, ಬೇಲರು, ಶೆಟ್ಟರು ಮುಂತಾದವರು. ಸೇರೆಗಾರ ಸೆಟ್ಟರು ಮೇಲ್‌ಸ್ತರಕ್ಕೆ ಬಂದರೆ ತಿಮ್ಮಿ–ಗುತ್ತಿ ಅತಿ ಕೆಳಸ್ತರಕ್ಕೆ ಸೇರುತ್ತಾರೆ. ಆದರೂ ಇವರೆಲ್ಲ. ಪ್ರಕೃತಿಗೆ ಹೊಂದಿಕೊಂಡೇ ಪ್ರಕೃತಿ ಸಹಜ ಜೀವನ ನಡೆಸುತ್ತಾರೆ. ಐತ–ಪೀಂಚಲು ಜೋಡಿಯನ್ನು ನೋಡಿದ ಮುಕುಂದಯ್ಯನ ದೃಷ್ಟಿಯಲ್ಲಿ ಕಿರಾತವೇಷದ ಶಿವ–ಶಿವಾನಿಯರಂತೆ ಗೋಚರವಾಗುತ್ತಾರೆ. ಅಂದರೆ ಇವರು ಪ್ರಕೃತಿಯಲ್ಲಿ ಹುಟ್ಟಿ ಪ್ರಕೃತಿಯಲ್ಲೆ ಬೆಳೆದು ಪ್ರಕೃತಿ ಆರಾಧಕರಾಗಿ ಪ್ರಕೃತಿಯ ಒಂದು ಅಂಗವಾಗಿ ಜೀವಿಸುತ್ತಾರೆ.

ಒಮ್ಮೆ ಏಡಿ ಹಿಡಿಯಲು ಹೋಗಿದ್ದಾಗ ಹೊಳೆ ದಾಟುವ ಸಂದರ್ಭದಲ್ಲಿ ಪೀಂಚಲು ಹೊಳೆಗೆ ಆಯತಪ್ಪಿ ಬೀಳುವಾಗ ಮುಕುಂದಯ್ಯ ಕೆಳವರ್ಗದ ಆಕೆಯನ್ನು ಕೈಯಾರೆ ಹಿಡಿದು ಬೀಳುವುದನ್ನು ತಪ್ಪಿಸುತ್ತಾರೆ. (ಮ.ಮ. ಪು.... ). ಕೆ.ವಿ. ಸುಬ್ಬಣ್ಣನವರು ತಮ್ಮ ಕುವೆಂಪುಗೆ ಪುಟ್ಟ ಕನ್ನಡಿ ಕೃತಿಯಲ್ಲಿ ಮುಕುಂದಯ್ಯ ಬಯಸಿದ್ದರೆ ಪೀಂಚಲುವಿನ ಸಮ್ಮತಿಯೂ ಇತ್ತು. ಐತನೂ ಇದಕ್ಕೆ ತಲೆಕೆಡಿಸಿಕೊಳ್ಳುತ್ತಿರಲಿಲ್ಲ (ಪು. ೭೨) ಎಂದು ಹೇಳುತ್ತಾರೆ. ಆದರೆ ಇದು ನಂಬಲಾರ್ಹವಾದ ವಿಷಯವಲ್ಲ. ಒಂದು ವೇಳೆ ಐತನ ಒಪ್ಪಿಗೆ ಇದ್ದಿತ್ತಾದರೆ ಒಮ್ಮೆ ಚಿನ್ನಮ್ಮನ ಮನೆಯಿಂದ ಪೀಂಚಲು ರಾತ್ರಿ ತಡವಾಗಿ ಬಂದಾಗ, ಹೊಸ ಸೀರೆ ಉಟ್ಟು ಹೋಳಿಗೆಯನ್ನು ತಂದಿದ್ದಾಗ ಆಕೆಯ ಮೇಲೆ ಅನುಮಾನ ಪಟ್ಟದ್ದೇಕೆ? ಐತನ ಸ್ನೇಹಿತರು ಪೀಂಚಲು ಮತ್ತು ಮುಕುಂದಯ್ಯನಿಗೆ ಸಂಬಂಧವಿದೆ ಎಂದಾಗ ತಾನೇ ಸ್ವತಃ ಪರೀಕ್ಷಿಸಿ ಯಾವುದೇ ಕಳ್ಳ ಸಂಬಂಧದ ಬಗ್ಗೆ ಸುಳಿವು ಸಿಗದಿದ್ದಾಗ ಸಮಾಧಾನ ಪಟ್ಟುಕೊಳ್ಳುತ್ತಾನೆ. ಯಾವ ಗಂಡಸು ತಾನೆ ತನ್ನ ಹೆಂಡತಿ ಬೇರೆಯವರೊಂದಿಗೆ ಸಂಬಂಧ ಇಟ್ಟುಕೊಂಡಿದ್ದನ್ನು ಸಹಿಸುತ್ತಾನೆ. ಇಷ್ಟಕ್ಕೂ ಐತ ಲೋಕಜ್ಞಾನವುಳ್ಳವನು.

ಕುವೆಂಪುರವರ ಪ್ರಕಾರ ಹೊಳೆದಾಟುವ ಸನ್ನಿವೇಶದಲ್ಲಿ ಮುಕುಂದಯ್ಯನಿಗೆ ಪೀಂಚಲುವಿನ ಮೇಲಿದ್ದ ಭಾವನೆ 'ಜಾತಿ ನಾಯಿಯನ್ನು ಮೆಚ್ಚಿ ಕೊಳ್ಳುವಂತೆ ಆಕೆಯನ್ನು ಮೆಚ್ಚಿಕೊಂಡಿದ್ದ' ಎಂಬ ರೀತಿಯದ್ದಾಗಿತ್ತು. ಮುಕುಂದಯ್ಯನಿಗೆ ಅಸ್ಪೃಶ್ಯತೆ ಬಗ್ಗೆ ಇದ್ದ ಅಭಿಪ್ರಾಯ ಇದರಿಂದ ಅಳೆಯಬಹುದು. ಆದರೆ ಅದೇ ಚಿನ್ನಮ್ಮನಿಗೆ ಪೀಂಚಲು ಆಪ್ತ ಸ್ನೇಹಿತೆಯಾಗಿರುವುದು ಸ್ನೇಹ ಸಹಕಾರ, ಸಹಬಾಳ್ವೆಗೆ ಪರಸ್ಪರ ಸ್ಫೂರ್ತಿ ನೀಡುತ್ತಾರೆ. ಜಾತಿ ಜಾತಿಗಳನ್ನು ಒಗ್ಗೂಡಿಸಲು ಸ್ನೇಹ ಎಷ್ಟು ಅಮೂಲ್ಯವಾದದ್ದು ! ಸ್ನೇಹದ ಮೂಲಕ ಕುವೆಂಪುರವರು ಜಾತಿ ವ್ಯವಸ್ಥೆ ನಿರ್ಮೂಲನಗೊಳಿಸಲು ಪ್ರಯತ್ನಿಸುತ್ತಾರೆ.

# ಅಧ್ಯಾಯ – ೭
# ಮಾನವೀಯ ಅಂಶಗಳು

ಹೂವಯ್ಯ ವೆಂಕಪ್ಪಯ್ಯ ಜೋಯಿಸರ ಕಂದಾಚಾರಗಳನ್ನು ಪ್ರಶ್ನಿಸಿದಾಗ ಹೂವಯ್ಯನ ಮೇಲೆ ಸಿಟ್ಟಾಗಿ ಅವನ ಮೇಲೆ ಪ್ರತೀಕಾರ ತೀರಿಸಿಕೊಳ್ಳಲು ಚಂದ್ರಯ್ಯ ಗೌಡರಿಗೆ ಹೀಗೆ ಹೇಳುತ್ತಾನೆ: "ಈ ಶೂದ್ರ ಮಕ್ಕಳಿಗೆಲ್ಲ ಉಪನಿಷತ್ತು ಭಗವದ್ಗೀತೆಗಳ ಗಂಧವಾದರೂ ಗೊತ್ತಾಗುತ್ತದೆಯೇ? ನಮಗೇ ಗೊತ್ತಾಗುವುದಿಲ್ಲ ಎನ್ನುತ್ತಾರೆ. ಹೌದು ನಿಜವಾಗಿಯೂ ವೆಂಕಪ್ಪಯ್ಯ ಜೋಯಿಸರಿಗೆ ಉಪನಿಷತ್ ಭಗವದ್ಗೀತೆಗಳು ಗೊತ್ತಿದ್ದರೆ ದೇವಾಲಯಗಳಲ್ಲಿ ವಾಚನ ಮಾಡುತ್ತಿರಲಿಲ್ಲವೆ? ಎಲ್ಲ ಮಕ್ಕಳಿಗೆ, ಅಲ್ಲದಿದ್ದರೂ ಬ್ರಾಹ್ಮಣ ಮಕ್ಕಳಿಗಾದರೂ ಹೇಳಿಕೊಡುತ್ತಿರಲಿಲ್ಲವೆ? ಕಾದಂಬರಿಯಲ್ಲಿ ಹಾಗೆ ಹೇಳಿಕೊಡುವ ಪ್ರಸ್ತಾಪವೇ ಬರುವುದಿಲ್ಲ. ಅಂದರೆ ಪರೋಕ್ಷವಾಗಿ ಅವರ ಮೂರ್ಖತನವನ್ನು ಅವರೇ ಹೇಳಿಕೊಳ್ಳುತ್ತಾರೆ. ಹೂವಯ್ಯನ ಆಧುನಿಕ ಆಲೋಚನೆಗೆ ಪ್ರತಿರೋಧ ಒಡ್ಡಲು ಜೋಯಿಸರಾದಿಯಾಗಿ ಕಂದಾಚಾರಿಗಳು ಪ್ರಯತ್ನ ಪಡುತ್ತಲೇ ಇರುತ್ತಾರೆ ಎಂಬ ಅಂಶವನ್ನು ಕುವೆಂಪು ಇಲ್ಲಿ ಚರ್ಚೆಗೆ ಎತ್ತಿಕೊಳ್ಳುತ್ತಾರೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಂದಾಚಾರಗಳನ್ನು ನಂಬುವ, ನಂಬಿಸುವ ಜನರು ಕಾಣಿಸುತ್ತಾರೆ. ತಿಮ್ಮಿಯನ್ನು ವಶೀಕರಿಸುವುದಕ್ಕೆ ಗುತ್ತಿ ಪಂಡಿತರೊಡನೆ 'ನನಗೊಂದು ಅಂತ್ರ ಬೇಕಿತ್ತಲ್ರೋ' ಎನ್ನುತ್ತಾನೆ. ಪಂಡಿತ ಅದಕ್ಕೆ ಪ್ರತಿಯಾಗಿ ಆತನಿಂದ ಕೋಳಿಯನ್ನು ಅಪೇಕ್ಷಿಸುತ್ತಾನೆ. ಗುತ್ತಿಯಂತಹ ದಲಿತರ ಮೇಲೆ ಮೂಢನಂಬಿಕೆಯ ಬಲೆ ಬೀಸುವುದಕ್ಕೆ ನಾಲ್ಕಕ್ಷರ ಕಲಿತ ಕೇರಳದ ಪಂಡಿತನಿಗೆ ಸಾಧ್ಯವಾಗುತ್ತದೆ. ಪುರೋಹಿತಶಾಹಿಗಳು ದಲಿತರನ್ನು ಹಿಂಸಿಸಲು ಇಂಥ ವಿದ್ಯೆ ಬಳಸುತ್ತಾರೆ ಎಂಬುದಕ್ಕಿದು ನಿದರ್ಶನ.

ಧಾರ್ಮಿಕ ನಂಬಿಕೆ ಸಾಮಾನ್ಯ ಜನರನ್ನು ಕೆಟ್ಟ ಕೆಲಸಗಳಿಗೆ ಬಳಸದಂತೆ ಮಾಡುತ್ತದೆ. ದೇವರ ಮೇಲಿನ ಭಯದಿಂದ ದೇವರಿಗೆ ಸಂಬಂಧಪಟ್ಟ ವಸ್ತುಗಳನ್ನು ಕದಿಯುವುದಿಲ್ಲ. ಇದಕ್ಕೆ ಸ್ಪಷ್ಟ ಉದಾಹರಣೆ ಕಾನೂರು ಹೆಗ್ಗಡಿತಿಯಲ್ಲಿ ಚಂದ್ರಮೌಳೀಶ್ವರನ ದೇವಾಲಯದ ಕೊಳದಲ್ಲಿದ್ದ ಮೀನನ್ನು ಹಿಡಿದ ಪಲ್ಯ ಮಾಡಿದರೆ ಅದು ಸಗಣಿಯಾಗಿ ಬಿಡುತ್ತದೆ ಎಂಬ ನಂಬಿಕೆ. ಮುಗ್ಧ ಜನರನ್ನು ಬ್ರಾಹ್ಮಣವರ್ಗದವರು ಹೇಗೆ ಭಯದ ಮೂಲಕ ಕಟ್ಟಿ ಹಾಕುತ್ತಿದ್ದರು ಎಂಬುದನ್ನು ಇದು ತಿಳಿಸುತ್ತದೆ.

ಹೂವಯ್ಯ ಮೂಲತಃ ಭಾವ ಜೀವಿ. ಅವನಿಗೆ ಆಸ್ತಿ, ಪಾಲಿನ ಬಗ್ಗೆ, ಸಂಸಾರದ ಬಗ್ಗೆ ವಿರಕ್ತಿ ಇತ್ತು. ತನ್ನ ಮಹದಾಶೆ ಕೈಗೊಳ್ಳಲು ಅಡ್ಡಿ ಬರುವ ಯಾವುದನ್ನೂ ಕೈಗೊಳ್ಳಲು

ಹಿಂಜರಿಯುತ್ತಿದ್ದನು. ಪ್ರಶಾಂತ ಮನಸ್ಥಿತಿಯವರೇ ಹೀಗೆ. ಸದಾ ಧ್ಯಾನಸ್ಥಿತಿಗಾಗಿ ಮನಃಶಾಂತಿ ಹೊಂದುವ ಮಹಾನ್ ವ್ಯಕ್ತಿಗಳ ಸಾಧು-ಸಂತರ ಸಾಲಿಗೆ ಆತ ಸೇರುತ್ತಾನೆ. ಬುದ್ಧನ ಆರಾಧಕನಾಗುತ್ತಾನೆ. ಈ ಕಾಲಘಟ್ಟದಲ್ಲಿ ನಿಂತು ನೋಡಿದಾಗ ಬುದ್ಧನ ಆಲೋಚನೆಗಳೇ ಸರಿ ಎಂದೆನ್ನುವ ಬುದ್ಧಿಜೀವಿಗಳು ನಮ್ಮ ಕಣ್ಣಿಗೆ ಅನೇಕ ಸಂಖ್ಯೆಯಲ್ಲಿ ಕಾಣಿಸುತ್ತಾರೆ. ಹೂವಯ್ಯ ಆ ಕಾಲಕ್ಕೆ ಬುದ್ಧನ ತತ್ವಗಳಿಂದ ಆಕರ್ಷಿತನಾದುದಕ್ಕೆ ಕಾದಂಬರಿಕಾರರ ಪರಕಾಯ ಪ್ರವೇಶ ಕಾರವಿದ್ದಿರಬಹುದು. ರಾಮಕೃಷ್ಣಪರಮಹಂಸರಿಗಿಂತ ಮೊದಲು ಬುದ್ಧ, ಕುವೆಂಪುರವರನ್ನು ಪ್ರಭಾವಿಸಿರುವ ಸಾಧ್ಯತೆ ಹೆಚ್ಚು.

ಸೀತೆ ಹೂವಯ್ಯನ ಹಾದಿಯನ್ನೇ ಹಿಡಿದು ತ್ಯಾಗ ಮನೋಭಾವದಿಂದ ಸಂಸಾರದಲ್ಲೇ ಸನ್ಯಾಸಿ ಜೀವನ ನಡೆಸುತ್ತಾಳೆ. 'ಸ್ಪರ್ಶಮಣಿ'ಯನ್ನೇ ಮುಟ್ಟದಂತಹ ಹೂವಯ್ಯನ ಆದರ್ಶ ಗುಣವನ್ನು ಅನುಸರಿಸುತ್ತಾಳೆ. ಪ್ರೀತಿಯನ್ನು ತ್ಯಾಗ ಮಾಡಿ ಬುದ್ಧ ಮತ್ತು ಅನೇಕ ಸಾಧು ಸಂತರ ಪದವನ್ನು ಪೂಜಿಸುತ್ತಾ ಆಧ್ಯಾತ್ಮಿಕ ಜೀವನವನ್ನು ಸ್ವೀಕರಿಸುತ್ತಾಳೆ.

ದೈವಾರಾಧನೆಗೆ ಸಿದ್ಧಗೊಳಿಸಿದ ಬಲೀಂದ್ರನು ತಪ್ಪಿಸಿಕೊಂಡು ಬಂದಾಗ ಅದನ್ನು ಹೂವಯ್ಯ ರಕ್ಷಿಸುತ್ತಾನೆ. ಪ್ರಾಣಿಗಳಿಗೂ ಆತ್ಮವಿದೆ. ಹಿಂಸೆಯನ್ನು ತಡೆಗಟ್ಟುವುದೇ ಅವನ ಮೂಲ ಉದ್ದೇಶವಾಗಿರುತ್ತದೆ.

'ಬುದ್ಧನು ಕ್ರಿಸ್ತ-ಬಸವ-ಗಾಂಧಿಯವರ ಕಥೆಗಳಲ್ಲೂ ಬರುವ ಪ್ರತಿಮೆಯಾಗಿರುವ ಕಾರಣ ಅವರುಗಳ 'ಸ್ಮೃತಿಯನ್ನು ಉದ್ಬೋಧಿಸಿಕೊಡುತ್ತದೆ. ಈ ಮೂಲಕ ಹೂವಯ್ಯನು ವೈದಿಕ ಹಿಂಸೆ(ಯಜ್ಞ)ಯನ್ನೂ, ಜಾನಪದಿಕ ಹಿಂಸೆ(ಬಲಿ)ಯನ್ನೂ ವಿರೋಧಿಸುತ್ತಾ ತಾತ್ಕಾಲಿಕ ಬದುಕಿನಲ್ಲಿ ಅತ್ಯವಶ್ಯಕವಾದ ಪ್ರೀತಿ ಅಹಿಂಸೆಗಳನ್ನು ಧರ್ಮದ ನಾಭಿಕೇಂದ್ರಕ್ಕೆ ತಂದಿದ್ದಾನೆ.' (ಕು.ಪು.ಕನ್ನಡಿ - ಸುಬ್ಬಣ್ಣ ಕೆ.ವಿ.ಪು. ೩೪).

ಕುವೆಂಪುರವರು ಹೇಳುವಂತೆ "ದೇವರು ಹೊರಗೆಲ್ಲೂ ಇಲ್ಲ. ಮೇಲಿನಿಂದ ಕೆಳಗಿಳಿದು ಬರುವುದಿಲ್ಲ. ಮನುಷ್ಯನ ಸಿದ್ಧಿ ಸಾಧನೆಗಳಲ್ಲಿ ದೇವರು ಪ್ರಕಟವಾಗುತ್ತಾನೆ. ಇಂತಹ ದೇವರ ಸಾಕ್ಷಾತ್ಕಾರಕ್ಕಾಗಿ ಪ್ರತಿಯೊಬ್ಬನೂ ಪ್ರಯತ್ನಿಸಬೇಕು. (ಕುಪ್ಪಳ್ಳಿ, ಒಂದು ನೆನಪು ಚಂದ್ರಶೇಖರನಂಗಲಿ)

ಈ ಕೆಲವು ಮಾತುಗಳು ಕುವೆಂಪು ಅವರಲ್ಲಿ ಮನೆಮಾಡಿರುವ ಆಧ್ಯಾತ್ಮಿಕತೆಯನ್ನು ಬಿಂಬಿಸುತ್ತವೆ. 'ಕಾನೂರು ಹೆಗ್ಗಡಿತಿ' ರಚನೆಯ ಕಾಲಕ್ಕೆ ಕುವೆಂಪು ಅವರು ಬುದ್ಧನ ಅಹಿಂಸಾ ತತ್ವಗಳಿಗೆ ಮಾರುಹೋದದ್ದೂ ತಿಳಿದುಬರುತ್ತದೆ.

## ಪ್ರಕೃತಿ ಆರಾಧನೆ

ಹೂವಯ್ಯ ಸೀತೆಯನ್ನು 'ನೀನು ಎಂದಾದರೂ ಕಣ್ಣೀರು ಸುರಿಸಿದ್ದಿದೆಯೇ? ಎಂದು ಕೇಳುವುದರಿಂದ ಆರಂಭವಾಗಿ ಬುದ್ಧಿಯಿಂದ ತಿಳಿಯಲಾರದುದು ಭಾವಗೋಚರವಾಗಿ ಆಕೆಯ ಹೃದಯದಲ್ಲಿ ಯಾವುದೋ ಒಂದು ಮಹಾ ಪರಿವರ್ತನೆಯುಂಟಾಗುತ್ತಿತ್ತು. ಪರಸ್ಪರ ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ. ಇಬ್ಬರ ಮನಸ್ಸಿನಲ್ಲೂ ಪ್ರಿಯ, ಪ್ರೇಯಸಿಯರ ಭಾವವಿರಲಿಲ್ಲ. ವಿಷಯದ ಉದಾರ ಔನ್ನತ್ಯ ಅವರಿಬ್ಬರ ಆತ್ಮಗಳನ್ನು ಶಾರೀರಿಕತೆಗೆ ಅತೀತವಾಗಿ ಮಾಡಿತ್ತು. ಆಗ ಅವರಿಬ್ಬರ ಸಂಬಂಧ ಹೆಚ್ಚು ಕಮ್ಮಿ ಗುರುಶಿಷ್ಯರದಾಗಿತ್ತು, ಒಬ್ಬ ವ್ಯಕ್ತಿಯ ಮೇಲೆ ಆಧ್ಯಾತ್ಮಿಕ ಪ್ರಭಾವ ಬೀರುವುದು ಅಷ್ಟು ಸುಲಭವಲ್ಲ. ಬೋಧನೆ ಮಾಡುವವನಿಗೆ ನಿಜವಾದ ಜ್ಞಾನ, ಆಸಕ್ತಿ ಇಂದ್ರಿಯ ನಿಗ್ರಹ, ಮನೋನಿಗ್ರಹ ಗುಣಗಳಿರಬೇಕು ಎಂಬುದನ್ನು ಹೂವಯ್ಯನ ಜ್ಞಾನದ ಮುಖಾಂತರ ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ.

"ನಾನು ಕಣ್ಣೀರು ಕರೆದಿದ್ದೇನೆ. ಸೀತೆ ಸಂಧ್ಯಾ ಸೌಂದರ್ಯವನ್ನು ನೋಡಿದಾಗ ನಿನಗೆ ಕಣ್ಣೀರು ಬರಲಿಲ್ಲ ಎಂದು ಹೇಳಿದೆಯಲ್ಲವೆ? ನನಗೆ ಕಣ್ಣೀರು ಬಂದಿದೆ ಎಷ್ಟೋ ಸಾರಿ ಬಂದಿದೆ" ಎನ್ನುತ್ತಾನೆ. ಹೂವಯ್ಯ 'ಪ್ರಕೃತಿಯಲ್ಲೆ ಪರಮನ ಆರಾಧನೆ' ಕಾಣುವ ಜಲಗಾರ ನಾಟಕದಲ್ಲಿನ ಸನ್ನಿವೇಶವೊಂದರಲ್ಲಿ ಭಗವಂತ ದೇವಾಲಯದಲ್ಲಿಲ್ಲ. ಪ್ರಕೃತಿ ಮನಸ್ಸಿನಲ್ಲೇ ಇದ್ದಾನೆ. ಆ ಮನಸ್ಸನ್ನು ಪ್ರಕೃತಿಯಲ್ಲಿ ಕೇಂದ್ರೀಕರಿಸಬೇಕೆಂಬುದು ಜಲಗಾರನಿಗೆ ದೇವಾಲಯಕ್ಕೆ ಪ್ರವೇಶ ನೀಡದ ಸನ್ನಿವೇಶಗಳಲ್ಲಿ ಕುವೆಂಪುರವರು ನೀಡಿದ ವಿಶ್ವ ಮಾನವ ಸಂದೇಶ. ಪ್ರಕೃತಿ ಆರಾಧನೆಗೆ ಅವರು ವಿಶೇಷ ಒತ್ತು ನೀಡಿದ್ದಾರೆ.

ಹೂವಯ್ಯನು ಗೌರವದ ಬದುಕಿಗೆ ಅಗತ್ಯವಾದ ಐಹಿಕ ಅಭಿವೃದ್ಧಿಗಳನ್ನು ಪ್ರತಿಪಾದಿಸುತ್ತಾನೆ. ಜೊತೆಗೆ ಅದಕ್ಕೆ ಕಿರೀಟ ಪ್ರಾಯವಾಗಿ ಆತ್ಮಿಕ ಅಭ್ಯುದಯವನ್ನು ಪ್ರತಿಪಾದಿಸುತ್ತಾನೆ. ಐಹಿಕ ಜೀವನ ಪ್ರಕೃತಿ ಸಹಜವಾಗಿ ಬಂದದ್ದು. "ಮಳೆಯಲ್ಲಿ ಮಿಂದ ಮರಗಿಡ ಬಳ್ಳಿಗಳ ಹಸುರೆಲೆಗಳಿಗೆ ಮತ್ತಿನಿತು ಹಸುರೇರಿ ಕಳಕಳಿಸಿ ನಗುತ್ತಿರುವ ಕಾಡುಗಳು ನೆಲದ ಹುಲ್ಲಿನ ಮೇಲೆಯೂ ಬಿದಿರು ಮಳೆಗಳಲ್ಲಿಯೂ ಬಳ್ಳಿಯ ಕುಡಿ ಕುಡಿಗಳಲ್ಲಿಯೂ ಎಲೆಗಳ ತುದಿಗಳಲ್ಲಿಯೂ ಜೇಡರ ಬಲೆಗಳಲ್ಲಿಯೂ ಜೇನುಹುಳುಗಳ ಓಂಕಾರನಾದದಲ್ಲಿಯೂ ಅವರು ಕವಿ ಎನ್ನುವುದನ್ನು ಸುಸ್ಪಷ್ಟವಾಗಿಸಿದ್ದಾರೆ. (ಗಂಗೋತ್ರಿ ಪು ೬೮೭)

ಪ್ರಕೃತಿಯ ರೌದ್ರತೆಯನ್ನು ರಾಮಯ್ಯ ಆತ್ಮಹತ್ಯೆ ಮಾಡಿಕೊಳ್ಳುವ ರಾತ್ರಿ ಮತ್ತು ಅನಂತರದ ದಿನ "ನಕ್ಷತ್ರಗಳು ಬಾಡಿ ಕಾಜಾಣದ ಇನಿದನಿಯೊಂದಿಗೆ ಬೆಳಕು ಹರಿಯುತ್ತದೆ. ಎನ್ನುವ ಸಂದರ್ಭದಲ್ಲಿ ಕುವೆಂಪು ಮ್ಲಾನತೆಯಿಂದ ಕೂಡಿ ಚಿತ್ರಿಸುತ್ತಾರೆ. "ಮೆನ್ ಮೆ ಕಮ್ ಅಂಡ್ ಮೆನ್ ಮೆ ಗೊ ಬಟ್ ಐ ಗೊ ಆನ್ ಫಾರ್ ಎವರ್" ಎಂದು ಟೆನಿಸನ್ ಕವಿಯ ವಾಹಿನಿ ಇದಕ್ಕೆ ನಿದರ್ಶನವಾಗಿದೆ. (ಗಂಗೋತ್ರಿ ಪು ೬೮೭) ಪ್ರಕೃತಿಯೊಂದಿಗೆ ವಿಕೃತಿಯನ್ನೂ ಗುರುತಿಸುತ್ತಾರೆ ಕುವೆಂಪು.

ಹೂವಯ್ಯ ಭೂಮಿ ಹುಣ್ಣಿಮೆ ಹಬ್ಬದಲ್ಲಿ ಬೇಟೆಗೆಂದು ಹೋದಾಗ ಅಲ್ಲೇ ಪ್ರಕೃತಿಯಲ್ಲೇ ಧ್ಯಾನ ಸ್ಥಿತಿಗೆ ಹೋಗುತ್ತಾನೆ. ಅದರಿಂದ ಮಾನಸಿಕವಾಗಿ ನೆಮ್ಮದಿ, ಶಾಂತಿ, ಸಂತೃಪ್ತಿ ಪಡೆಯುತ್ತಾನೆ. ಪ್ರಕೃತಿಕೊಡುವ ನೆಮ್ಮದಿಯನ್ನು ಕುವೆಂಪು ಇನ್ನೊಂದು ವಿಧವಾಗಿ ಚಿತ್ರಿಸುತ್ತಾರೆ.

ಬುದ್ಧನ ವಿಗ್ರಹದ ಮುಂದೆ ಕುಳಿತು ಸರ್ವೇಚಿತ್ತದಿಂದ ನೋಡುತ್ತಾ "ಗುರುದೇವಾ ನನ್ನನ್ನು ಕೈಹಿಡಿದೆತ್ತಿಕೊ. ಉದ್ದಾರ ಮಾಡು. ನಿನ್ನ ಮಹಾಗುಣದಲ್ಲಿ ಒಂದಿನಿತನ್ನಾದರೂ ದಯಪಾಲಿಸು. ನನ್ನ ಜೀವನವನ್ನು ಸಾರ್ಥಕಮಾಡು" ಎಂದು ಹೂವಯ್ಯ ಬೇಡುತ್ತಾನೆ. (ಕಾ. ಹೆ. ಪು. ೬೨೦). ಅನಂತರ ರಾಮಯ್ಯ ಸೀತೆಯರನ್ನು ಒಂದಾಗಿಸಲು ತೀರ್ಮಾನ ಕೈಗೊಳ್ಳುತ್ತಾನೆ. ಬುದ್ಧನ ಕೃಪಾಹಸ್ತದಿಂದ ನೆರವಾಗಿದೆಯೆಂಬ ಶ್ರದ್ಧೆಯಿಂದ ಧ್ಯಾನಿಸುತ್ತಾನೆ. ಪರಿಣಾಮವಾಗಿ ನೀರಿನಲ್ಲಿ ಮುಳುಗಿ ಗಾಳಿಗಾಗಿ ಹಾತೊರೆಯುತ್ತಿದ್ದವನನ್ನು ದಡಕ್ಕೆ ಎಳೆದಂತಾಗುತ್ತದೆ. ಅಂದರೆ ಹೂವಯ್ಯನಿಗೆ ಪ್ರತಿಜ್ಞೆ ಈಡೇರಿದ ಖುಷಿ ಸಿಗುತ್ತದೆ. ಕಲ್ಲಿನಿಂದ ಹೂವು ಮೂಡುತ್ತದೆಂದು ಎಂದೂ ಅವನು ಭಾವಿಸಿರಲಿಲ್ಲ. ಅಂತಹ ದುಃಖದಿಂದ ಇಂತಹ ಆನಂದ, ಅಂತಹ ಕಠೋರ ತ್ಯಾಗದಿಂದ ಇಂತಹ ಪರಮಶಾಂತಿ ದೊರೆಯುವುದೆಂದು ಯಾರಿಗೆ ತಾನೆ ಗೊತ್ತು? ಹೂವಯ್ಯ ಎಳವೆಯಲ್ಲೇ ತನ್ನನ್ನು ತಾನು ಆಧ್ಯಾತ್ಮಿಕತೆಗೆ ಒಡ್ಡಿಕೊಂಡಿರುವುದು ಆಶ್ಚರ್ಯ ಹುಟ್ಟಿಸುತ್ತದೆ.

**ಭಕ್ತಿ :**

"ದೇವರು ಈ ಜಗತ್ತನ್ನೆಲ್ಲಾ ಸೃಷ್ಟಿ ಮಾಡಿದ್ದಾನೆ. ಅವನು ಎಲ್ಲೆಲ್ಲಿಯೂ ಇದ್ದಾನೆ. ನೀನಾಡುತ್ತಿರುವ ಮಾತುಗಳನ್ನೂ ಕೇಳುತ್ತಿದ್ದಾನೆ. ಅವನು ಏನು ಬೇಕಾದರೂ ಮಾಡಲು ಶಕ್ತನು. ನಾವು ಅವನನ್ನು ಪ್ರೀತಿಸಬೇಕು. ಅದನ್ನೇ ಭಕ್ತಿ ಎಂದು ಕರೆಯುತ್ತಾರೆ. (ಕಾ.ಹೆ.೧೭೬೮)

ಹೂವಯ್ಯನ ಈ ಮಾತುಗಳು ಅವನನ್ನು ಓರ್ವ ಸಂತನ ಮಟ್ಟಕ್ಕೆ ತಂದು ನಿಲ್ಲಿಸುತ್ತದೆ. ಮುಂದೆ ಕುವೆಂಪು ಮಲೆಗಳಲ್ಲಿ ಮದುಮಗಳು ಕಾದಂಬರಿ ರಚಿಸಿದಾಗ ಈ ರೀತಿಯ ಮನೋಭಾವ ಇನ್ನಷ್ಟು ವಿಸ್ತೃತರೂಪ ತಾಳುತ್ತದೆ.

ದೇವರು ಸರ್ವಾಂತರ್‌ಯಾಮಿ. ಆತನಿಗೆ ರೂಪವಿಲ್ಲ, ಆಕಾರವಿಲ್ಲ. ಅಣುರೇಣು ತೃಣ ಕಾಷ್ಟಗಳಲ್ಲೂ ನೆಲಸಿದ್ದಾನೆ. ಸದಾ ನಮ್ಮನ್ನು ನೋಡುತ್ತಿದ್ದಾನೆ. ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಅವನನ್ನು ಭಕ್ತಿಯಿಂದ ಪೂಜಿಸಬೇಕೆಂದು ಹೂವಯ್ಯ ಹೇಳುತ್ತಾನೆ.

ಹೂವಯ್ಯ ಸೀತೆಗೆ ಭೂಪಟ ಪರಿಚಯಿಸುತ್ತಾ ಅದರಲ್ಲಿ ಭರತಖಂಡ, ಮೈಸೂರು ರಾಜ್ಯ, ತೀರ್ಥಹಳ್ಳಿಗಳನ್ನು ಗುರುತಿಸುತ್ತಾ ಸೀತೆಗೆ "ಮುತ್ತಳ್ಳಿ ಇದರಲ್ಲಿ ಎಲ್ಲಿ ಬರುತ್ತದೆ?" ಎಂದು ಕೇಳಿದಾಗ ಮುತ್ತಳ್ಳಿ ಭೂಪಟದಲ್ಲಿ ಚಿಕ್ಕ ಸ್ಥಳ ಎಂದು ಹೇಳುತ್ತಾನೆ. ಆಕೆಗೆ ತನ್ನ ಊರಿನ ಬಗ್ಗೆ ಇದ್ದ ಕಲ್ಪನೆ ತನ್ನ ರಾಜ್ಯದ ಬಗ್ಗೆ ಇದ್ದ ಕಲ್ಪನೆ ಕ್ಷುಲ್ಲಕವಾಗಿ ಕಾಣುತ್ತದೆ. ಒಂದು ರೀತಿಯಲ್ಲಿ ನೋಡಿದರೆ ವಿಶ್ವ ವಿಶಾಲವಾಗಿದೆ. ಇಡೀ ಪ್ರಪಂಚದ ಪರಿಚಯ ವಿಶಾಲ ಅನುಭವ ಉಂಟಾಗಿ ಭೌತಿಕ ವಸ್ತುವಿಗಿಂತ ಭಗವಂತನೇ ಮೇಲು ಎಂಬ ಅನುಭವ ಆಕೆಗಾಗುತ್ತದೆ. ಒಬ್ಬ ಹಳ್ಳಿಯ ಹುಡುಗಿಗೆ ಇಡೀ ಜೀವನದ ಅರ್ಥ, ಭಕ್ತಿ, ಭಗವಂತ ಪ್ರಪಂಚದ ಬಗೆಗಿನ ಅರಿವುಗಳನ್ನು ಪರಿಚಯಿಸುತ್ತೆ. ಆಕೆಯನ್ನೂ ತನ್ನ ಆದರ್ಶ ಆಧ್ಯಾತ್ಮಿಕದೆಡೆಗೆ ಹೂವಯ್ಯ ಸೆಳೆಯುತ್ತಾನೆ. ಇದೇ ಅಲ್ಲವೆ ನಾಯಕನಾದವನು ಮಾಡಬೇಕಾದ ಕರ್ತವ್ಯ. ಇದು ಅವರ ವಿಶ್ವಮಾನವತೆಗೆ ಸಾಕ್ಷಿಯಾಗಿದೆ.

**ಪ್ರಾರ್ಥನೆಯ ಫಲ :**

ಮನಃಪೂರ್ವಕವಾಗಿ ದೇವರನ್ನು ಪ್ರಾರ್ಥಿಸಿದರೆ ಇಷ್ಟಾರ್ಥ ನೆರವೇರುತ್ತದೆ ಎಂದು ಹೂವಯ್ಯ ಸೀತೆಗೆ ಹೇಳಿರುತ್ತಾನೆ (ಕಾ.ಹೆ.ಪು. ೨೨೯). ಸೀತೆಗೆ ದೇವರ ಮೇಲಿನ ನಂಬಿಕೆ ದೃಢವಾಗುತ್ತದೆ. ಆಕೆಯ ಮದುವೆಯ ಸಂದರ್ಭದಲ್ಲಿ ಸೀತೆ 'ರಾವಣನಿಂದ ಪಾರಾಗಿ ಮತ್ತೆ ರಾಮನನ್ನು ಸೇರಲಿಲ್ಲವೆ?' ಸೀತೆಯನ್ನು ಕೃಷ್ಣಪ್ಪ ಮದುವೆಗೆ ಕೇಳಿದರೇನು? 'ಭಕ್ತಿಯಿಂದ ಪೂಜಿಸಿದರೆ ದೇವರು ಒಲಿದ ಜಾತಕ ಕೂಡ ಕೂಡಿ ಬರದೆ ಕೃಷ್ಣಪ್ಪನೊಂದಿಗೆ ಮದುವೆ ನಿಂತು ಹೋಗುತ್ತದೆಯಲ್ಲವೆ?' ಎಂಬುದು ಆಕೆಯ ಅಭಿಪ್ರಾಯ. ಆ ಸಂದರ್ಭದಲ್ಲಿ ಭಗವಂತನ ಪೂಜೆ ಮುಖ್ಯವಾಗಿತ್ತು. ಆದರೆ ಸಮಾಜದ ಕುಟಿಲತೆ ಆಕೆಗೆ ಅರ್ಥವಾಗಿರಲಿಲ್ಲ.

ತನ್ನ ಮದುವೆ ಬಗ್ಗೆ ಕುಯುಕ್ತಿಗಳು ನಡೆಯುತ್ತಿವೆ ಎಂಬುದು ಮಾತ್ರ ಆಕೆಗೆ ಅರಿವಿರಲಿಲ್ಲ. ಹಿರಿಯರ ಪುರೋಹಿತರ ಕೈವಾಡಗಳಿವೆ ಎಂದೂ ಗೊತ್ತಿರುವುದಿಲ್ಲ.

**ಹಿಂದೂ ಧರ್ಮದರ್ಶನ :**

ಭೂತಾರಾಧನೆಯನ್ನು ವಿರೋಧಿಸಿದ ಪರಿಣಾಮವಾಗಿ ಹೂವಯ್ಯನಲ್ಲಿ ಮೂಡುವ ಪ್ರಶ್ನೆಗಳು ಆರ್ಯಧರ್ಮದ ಉತ್ತಮ ಆದರ್ಶವೇನು? ಉಪನಿಷತ್ತು ಭಗವದ್ಗೀತೆಗಳ ಮಹೋನ್ನತ ದಿವ್ಯ ದರ್ಶನವೆಲ್ಲಿ? ಈ ಮಂದಿ ಕೈಗೊಂಡಿರುವ ಪಿಶಾಚಾರಾಧನೆಯಲ್ಲಿ ಫಲವೇನು? ಇತ್ಯಾದಿಗಳು ಹಿಂದೂಧರ್ಮದೊಳಗೆ ತಮಗೆ ಜೀವನದಲ್ಲಿ ಯಾವುದೆಲ್ಲಾ ಉಪಕಾರಯೋಗ್ಯವೋ ಅವೆಲ್ಲವೂ ದೇವರ ಸ್ಥಾನ ಪಡೆಯುತ್ತವೆ. ನೀರು-ಗಂಗೆಯಾಗಿ, ಮರ-ವೃಕ್ಷದೇವತೆಯಾಗಿ ಶಸ್ತ್ರಾಸ್ತ್ರಗಳು-ಆಯುಧಗಳಾಗಿ, ದನವನ್ನು ಗೋಮಾತೆಯಾಗಿ ಪೂಜಿಸಲಾಗುತ್ತದೆ. ಆದರೆ ಇಂದು ಮನುಷ್ಯನ ಧನಪಿಶಾಚಿ ಪ್ರವೃತ್ತಿಯಿಂದ ಮಾನವೀಯತೆ ಮರೆತು ಗಂಗೆ ಮಲಿನವಾಗುತ್ತಿದ್ದಾಳೆ. ವೃಕ್ಷಗಳು ಕಾಳಸಂತೆಕೋರರ ಕೈ ಸೇರುತ್ತಿವೆ. ಆಯುಧಗಳು ಹೊಸರೂಪ ತಳೆದು ದೇಶದ ಅವನತಿಗೆ ದಾರಿ ಮಾಡಿಕೊಡುತ್ತಿವೆ. ಗೋವು ಮಾತೃಸ್ವರೂಪಿಣಿಯಾಗಿ ಪೂಜಿಸಲ್ಪಡುವ ಬದಲು ಕಸಾಯಿಖಾನೆ ಸೇರುತ್ತಿವೆ. ಸಮಾಜ ವ್ಯಾಪಾರ ಪ್ರವೃತ್ತಿಗೆ ಪರಿವರ್ತನೆ ಆಗುವುದನ್ನು ಕಾಣುತ್ತೇವೆ. ಹಿಂದೂ ಧರ್ಮದಲ್ಲಿ ಜೀವದ ಬಗ್ಗೆ ವಿಶೇಷ ಪೂಜ್ಯ ಭಾವನೆ ಇದೆ. ಇಂದು ಮುಗ್ಧ ಪ್ರಾಣಿಗಳಾದ ದನ, ಕುರಿ, ಆಡುಗಳು ಲಾಭದ ದೃಷ್ಟಿಯಿಂದ ಬೆಳೆಸಲ್ಪಟ್ಟು ಅವುಗಳ ಜೀವಕ್ಕೆ ಬೆಲೆಯೇ ಇಲ್ಲದಂತಾಗಿದೆ. 'ಅಹಿಂಸಾ ಪರಮೋ ಧರ್ಮ' ಎಂದು ಸಾರಿದ ಬುದ್ಧ, ಮಹಾವೀರ ಬಸವಣ್ಣರ ತತ್ವಗಳು ಗಾಳಿಗೆ ತೂರಿಹೋಗುತ್ತಿವೆ. ಒಂದು ವೇಳೆ ಪಾದ್ರಿಗಳು ಹಿಂದೂ ಧರ್ಮದ ಆಚಾರ-ವಿಚಾರಗಳನ್ನು ಪ್ರಶ್ನಿಸಿ ಖಂಡಿಸಿದರೆ ಅದಕ್ಕೆ ಉತ್ತರವಿಲ್ಲದೆ ನಮ್ಮ ಮೂರ್ಖತನವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ॥
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

ಒಂದು ಎಲೆಯನ್ನಾಗಲಿ ಒಂದು ಹೂವನ್ನಾಗಲಿ ಒಂದು ಹಣ್ಣನ್ನಾಗಲಿ ನನಗೆ ಯಾವನಾದರೂ ಭಕ್ತಿಯಿಂದ ನಿವೇದಿಸಿದರೆ ಅದನ್ನು ಆನಂದದಿಂದ ಸ್ವೀಕರಿಸುತ್ತೇನೆ. (ಕಾ.ಹೆ.ಪು. ೨೫೪). ಇದು ಭಗವಂತ ಭಕ್ತನ ಕುರಿತು ಹೇಳುವ ಮಾತು.

ಮೇಲಿನ ಯಾವುದಾದರೂ ಒಂದು ವಸ್ತುವನ್ನು ಭಕ್ತಿಯಿಂದ ದೇವರಿಗೆ ಅರ್ಪಿಸಿದರೆ ಭಗವಂತ ಸುಲಭವಾಗಿ ಒಲಿಯುತ್ತಾನೆಂಬ ಭಾವ. ಆದರೆ ಹೂವಯ್ಯ ಭಾವಸಮಾಧಿಯಿಂದ ಅಶ್ರುತರ್ಪಣವನ್ನೇ ನೈವೇದ್ಯವಾಗಿ ನೀಡುವ ಮೂಲಕ ಪರಮ ನೈವೇದ್ಯವನ್ನು ಅರ್ಪಿಸಿದೆನೆಂಬ ಧನ್ಯತಾಭಾವ ಪಡೆಯುತ್ತಾನೆ. ಪ್ರಕೃತಿಗಾಗಿ, ಸಮಾಜಕ್ಕಾಗಿ ತುಡಿಯುವ ಮನಸ್ಸು ಕಾರಣವಾಗಿ ಹಾಗೂ ಪ್ರಾಣಿಗಳ ಬಗ್ಗೆ ದಯೆ ಇರುವ ನಿಜವಾದ ಮಾನವತಾವಾದಿಯಾಗಿ ಹೂವಯ್ಯ ಕಾಣಿಸಿಕೊಳ್ಳುತ್ತಾನೆ.

**ಅಹಿಂಸೆ:**

ಕಾದಂಬರಿಗಳ ಉದ್ದಕ್ಕೂ ಪ್ರಾಣಿಗಳ ಬಗ್ಗೆ ದಯೆ ತೋರುವ ಅಂಶಗಳನ್ನು ಗಮನಿಸಿದರೆ ಕಾದಂಬರಿಕಾರರಿಗೆ ಪ್ರಾಣಿಗಳ ಬಗ್ಗೆ ನಿಜವಾದ ಕಾಳಜಿ ಇರುವುದು ಕಂಡು ಬರುತ್ತದೆ. ಉದಾ: ಕಾ.ಹೆ.ಯಲ್ಲಿ ಚೆನ್ನಯ್ಯ ಮೀನು ಬೇಟೆಯಲ್ಲಿ ಮೀನನ್ನು ಗುಂಡಿಟ್ಟು ಹೊಡೆಯುತ್ತಾನೆ. ಇನ್ನೊಂದೆಡೆ ಸೇರೆಗಾರರು ಸೌಂದರ್ಯ ಪುಂಜದಂತಿದ್ದ ಹುಂಜಕ್ಕೆ ಗುಂಡಿಟ್ಟು ಹೊಡೆಯುತ್ತಾರೆ. ಗಂಗ ಕಪ್ಪೆಯೊಂದನ್ನು ಹೊಡೆದು ಕಪ್ಪೆಗೋಲಿಗೆ ಹಾಕಿ ಅನೇಕ ಏಡಿಗಳನ್ನು ಹಿಡಿಯುತ್ತಾನೆ. ಇನ್ನು ಕೋಳಿ ಅಂಕದ ಪ್ರಸಂಗದ ಹೃದಯ ವಿದ್ರಾವಕ (ಕಾ.ಹೆ. ಪು. ೬೮೯). ಪ್ರಾಣಿಗಳೆಂದರೇನೇ ಹಾಗೆ. ಮನುಷ್ಯರು ಅವುಗಳ ಜೀವದ ಬಗ್ಗೆ ಕ್ಷುಲ್ಲಕವಾಗಿ ವರ್ತಿಸುತ್ತಾರೆ. 'ಅಹಿಂಸಾ ಪರಮೋ ಧರ್ಮ' ಎಂಬ ನಾಡಿನಲ್ಲಿ ಎಲ್ಲೆಲ್ಲೂ ಪ್ರಾಣಿ ಹಿಂಸೆ ತಾಂಡವವಾಡುತ್ತಿದೆ. ಕುವೆಂಪುರವರು ಆಧ್ಯಾತ್ಮಿಕತೆ ಮೂಲಕ ಸಮಾಜದ ಒಳಿತಿಗಾಗಿ ಆಧುನಿಕ ಚಿಂತನಾ ಕ್ರಮಗಳನ್ನು ಕೈಗೊಳ್ಳುತ್ತಾ ಸಾಗಿರುವುದು ಆದರ್ಶಪ್ರಾಯವೇ ಸರಿ. ಬಲೀಂದ್ರನೆಂಬ ಹೋತವನ್ನು ದೈವದ ಹೆಸರಲ್ಲಿ ಬಲಿಕೊಡದಂತೆ ತಡೆದು ನಿಜವಾದ ಮಾನವೀಯತೆಯನ್ನು ಮೆರೆಯುತ್ತಾರೆ.

**ಆತ್ಮ:**

ಮುಕುಂದಯ್ಯ ಮತ್ತು ದೇವಯ್ಯನವರು ಗಡ್ಡದಯ್ಯನೊಂದಿಗೆ ಕೆಲವು ಮೂಲಭೂತ ಸಮಸ್ಯೆಗಳ ಕುರಿತು ಮಾತನಾಡುತ್ತಾನೆ. ಆ ಸಮಸ್ಯೆಗಳು ವೈಯಕ್ತಿಕವಾಗಿರದೆ ಹಿಂದೂ ಮತ, ಜಾತಿಪದ್ಧತಿ ಬ್ರಾಹ್ಮಣರಿಂದ ಬ್ರಾಹ್ಮಣೇತರರಿಗೆ ಆಗುತ್ತಿರುವ ಅನ್ಯಾಯದ ಕುರಿತದ್ದೂ ಆಗಿದೆ. ಹಿಂದೂ ದೇವರುಗಳಲ್ಲಿ ಕಂಡುಬರುವ ಅನೈತಿಕ ವ್ಯಾಪಾರ, ಕ್ರೈಸ್ತಮತ ಪ್ರಚಾರದ ವೇಳೆ ಕ್ರೈಸ್ತರು ಕೈಗೊಳ್ಳುತ್ತಿರುವ ಉದ್ಧಾರ ಕಾರ್ಯ ಇತ್ಯಾದಿಗಳ ಬಗ್ಗೆ ದೇವಯ್ಯ ಮಾತನಾಡುತ್ತಾನೆ.

ಸನ್ಯಾಸಿಯು ಆ ಎಲ್ಲ ಸಮಸ್ಯೆಗಳನ್ನು ಒಪ್ಪಿಕೊಳ್ಳುತ್ತಾನೆ. ಕಾರಣ ವ್ಯವಸ್ಥೆಯಲ್ಲಿ ನಡೆಯುವ ಶೋಷಣೆಗಳು ಕಣ್ಣಿಗೆ ಕಟ್ಟಿದಂತಿದ್ದವು. ದೇಶದ ಉದ್ಧಾರಕ್ಕಾಗಿ ಕೆಳವರ್ಗದವರ ಅಸ್ತಿತ್ವದ ಉಳಿವಿಗಾಗಿ ಚಿಂತನೆ ಮಾಡಬೇಕಾಗಿದ್ದ ವಿಷಯಗಳಾಗಿದ್ದವು. ಆ ಕಾರಣದಿಂದಲೇ ಗಡ್ಡದಯ್ಯ ಅವನ್ನೆಲ್ಲ ಒಪ್ಪಿಕೊಳ್ಳುತ್ತಾನೆ.

ಮಲೆಗಳಲ್ಲಿ ಮದುಮಗಳುವಿನಲ್ಲಿ ಗಡ್ಡದಯ್ಯ ಚಿಕಾಗೊ ಸರ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದ ಎಂಬ ಸನ್ಯಾಸಿ ಹಿಂದೂ ಧರ್ಮದ ಮೇಲ್ಮೆಯ ವಿಚಾರವಾಗಿ ಉಪನ್ಯಾಸ ಮಾಡಿದ ವೈಖರಿಯನ್ನು ಕುರಿತು ಹೇಳುತ್ತಾನೆ. ಅದನ್ನು ಕೇಳಿದ ದೇವಯ್ಯನಿಗೆ ರೋಮಾಂಚನವಾಗುತ್ತದೆ. ಎದ್ದು ಕುಣಿದಾಡುವಂತಾಗುತ್ತದೆ.

ಗಡ್ಡದಯ್ಯ ಸನ್ಯಾಸಿ ಅತೀಂದ್ರೀಯ ಜ್ಞಾನ ಹೊಂದಿದ್ದ ಎಂಬ ವಿಷಯಕ್ಕೆ ಸಾಕ್ಷಿಯಾಗಿ ವಿವೇಕಾನಂದರು ಶಿಷ್ಯೆ ಕ್ರಿಸ್ಟೈನ್‌ಗೆ ಹೇಳುವ, ತಮ್ಮ ಅತೀಂದ್ರಿಯ ಜ್ಞಾನದಿಂದ ತೀರ್ಥಹಳ್ಳಿ ಮೂಲೆಯಲ್ಲಿ ಧರ್ಮಾಂತರ ಪ್ರಹಸನ ನಡೆದಿರುವುದನ್ನು ಕಂಡುಕೊಂಡದ್ದರ ಪ್ರಸಂಗ, ಕಲ್ಕತ್ತಾದ ವರಾಹನಗರದ ಇಬ್ಬರು ತರುಣ ಸನ್ಯಾಸಿಗಳು ದಕ್ಷಿಣೇಶ್ವರಕ್ಕೆ ಬಂದು ಭವತಾರಿಣಿಯ ಸಾನ್ನಿಧ್ಯದಲ್ಲಿ ಧ್ಯಾನಸ್ಥರಾಗಿದ್ದಾಗ ಅವರಿಗೂ ಕಾಣುವ ಮೇಲಿನ ತರಹದ್ದೇ ಅತಿಮಾನುಷ ದರ್ಶನ, ಸಮುದಾಯದ ಪುಟ್ಟಬಾಲಕಿ ಚಿನ್ನಮ್ಮನು ಮುಕುಂದಯ್ಯನನ್ನು ಮೊಟ್ಟ ಮೊದಲ ಸಲ ಕಾಣುತ್ತಿದ್ದ ಹಾಗೇ ಈತ ತನ್ನ ಗಂಡನಾಗಿದ್ದವನೆಂದು ಗುರುತಿಸುವ ಜನ್ಮಾಂತರದ ಪ್ರಸಂಗ ಇವೆಲ್ಲ ಇಲ್ಲಿ ದಾಖಲಾಗಿದೆ. (ಕು.ಪು.... ಸುಬ್ಬಣ್ಣ ಕೆ.ವಿ. ಪು. ೬೬). ಆತ್ಮ ಪರಮಾತ್ಮ ಸಂಬಂಧಗಳ ಫಲವಾಗಿಯೇ ಇಂತರ ಅದ್ಭುತ ಘಟನೆಗಳು ನಡೆಯಲು ಸಾಧ್ಯ ಎಂಬ ತೀರ್ಮಾನ ಅಲ್ಲಿ ಬಿಂಬಿತವಾಗುತ್ತದೆ.

ಇಲ್ಲಿ ಗಡ್ಡದಯ್ಯ ಅಸಾಮಾನ್ಯ ವ್ಯಕ್ತಿಯಾಗಿದ್ದಾನೆ. ಆತ್ಮಗಳನ್ನು ಪುನರ್‌ಜನ್ಮಗಳನ್ನು ಕುರಿತು ಚಿಂತಿಸುವ ಮಹಾನ್ ಜ್ಞಾನಿಯಾಗಿದ್ದಾನೆ. ಆತ ಹಿಂದೂ ಧರ್ಮದ ಉದ್ಧಾರಕ್ಕಾಗಿ ಜಗತ್ತಿಗೆ ಅವತರಿಸಿದ ವಿವೇಕಾನಂದರ ಸಾಲಿನಲ್ಲಿ ಬರುತ್ತಾನೆ. ಭವಾಕಾರ, ಆತ್ಮಗಳನ್ನು ಕುರಿತು ಹೇಳುವಾಗ, ದೊಡ್ಡಣ್ಣಹೆಗ್ಗಡೆ ತಿರುಪತಿಗೆ ಹೋಗಿ ಅಲ್ಲೆ ಮರಣ ಹೊಂದಿದನೆಂದೂ ಆತ್ಮ ಮಾತ್ರ ಇತರರಲ್ಲಿ ಸೇರಿ ಹೋಗಿದೆಯೆಂದೂ ತಿಳಿಸುತ್ತಾನೆ. ಅಲ್ಲೇ ಇದ್ದ ಆ ದೇಹಕ್ಕೆ (ದೊಡ್ಡಣ್ಣನ) ಬೇರೊಬ್ಬ ಮಹಾನ್ ಯೋಗಿಯ ಆತ್ಮ ಸೇರಿದೆ ಎಂದು ಮುಂದೆ ಆತನ ಹೆಂಡತಿಯಾದ ರಂಗಮ್ಮನು ಸತ್ತು ಮುಕುಂದಯ್ಯ –ಚಿನ್ನಮ್ಮರ ಹೊಟ್ಟೆಯಲ್ಲಿ ಹುಟ್ಟಿ ತನ್ನ

ಹಿಂದಿನ ಜನ್ಮದ ಗಂಡನನ್ನೆ ಮದುವೆಯಾಗುತ್ತಾಳೆ ಎಂದು ಹೇಳುತ್ತಾನೆ. ದೊಡ್ಡಣ್ಣ ಅದಾಗಲೇ ಸತ್ತ ದೇವಯ್ಯನ ಹೊಟ್ಟೆಯಲ್ಲಿ ಚಲುವಯ್ಯನಾಗಿ ಹುಟ್ಟಿದ್ದಾನೆ.

ಸನ್ಯಾಸಿ ಎಷ್ಟು ಜ್ಞಾನ ಸಂಪತ್ತನ್ನು ಹೊಂದಿದ್ದನೆಂದರೆ ಮೈಸೂರು ಬೆಂಗಳೂರುಗಳಿಂದ ಆಗ ತಾನೆ ಹೊರಡುತ್ತಿದ್ದ ಪತ್ರಿಕೆಗಳೂ ಕಂಡರಿಯದಂತಹ ವಿಷಯಗಳನ್ನೂ ವಿದೇಶದ ಹೆಸರುಗಳನ್ನೂ ವಿವೇಕಾನಂದರ ಹೆಸರನ್ನೂ ಉಪನಿಷತ್ತು ವೇದಾಂತ ಮುಂತಾದ ವಿಷಯಗಳನ್ನೂ ಕುರಿತು ಅರ್ಥವತ್ತಾಗಿ ಮಾತನಾಡಬಲ್ಲವರಾಗಿದ್ದರು.

ಪುನರ್ಜನ್ಮ ಸಿದ್ಧಾಂತ ಕುವೆಂಪು ಅವರು ಕಾದಂಬರಿ ರಚಿಸುವ ಕಾಲಘಟ್ಟದಲ್ಲಿ ಚರ್ಚೆಗೆ ಆಸ್ಪದವಾದ ವಿಷಯವಾಗಿತ್ತು. ಆ ಬಗ್ಗೆ ಇಂದಿಗೂ ಚರ್ಚೆಗಳು ನಡೆಯುತ್ತಲೇ ಇದೆ. ಇದಮಿತ್ಥಂ ಎಂಬುದಾಗಿ ಆ ಬಗ್ಗೆ ಹೇಳುವುದು ಬಹು ಕಷ್ಟ. ಆ ಕಾಲ ಘಟ್ಟದಲ್ಲಿ ಪುನರ್ಜನ್ಮ ಎನ್ನುವುದು ಆಧುನಿಕ ಪರಿಭಾಷೆಯೇ ಆಗಿದ್ದಿರಬಹುದು. ಕುವೆಂಪು ಅವರು ತಮ್ಮ ಈ ಹಿನ್ನೆಲೆಯ ಸಹಕಾರದಿಂದ ಅದನ್ನು ವಿಶ್ಲೇಷಿಸಿದ್ದಾರೆ.

ಮುಕುಂದಯ್ಯ ತನ್ನ ವೈಯುಕ್ತಿಕ ವಿಷಯವಾದ ಮದುವೆಯನ್ನು ಕುರಿತು ಗಡ್ಡದಯ್ಯನನ್ನು ಪ್ರಶ್ನಿಸಲು "ಹೋದ ಜನ್ಮದಲ್ಲಿ ನೀವಿಬ್ಬರೂ ದಂಪತಿಗಳಾಗಿದ್ದಿರಿ. ಈ ಜನ್ಮದಲ್ಲೂ ಅದು ಮುಂದುವರಿಯುತ್ತದೆ" (ಮ.ಮ. ಪುಟ ೪೬೧) ಎಂದು ಆ ಸನ್ಯಾಸಿ ಹೇಳಬಲ್ಲವನಾಗಿದ್ದ. ಎಷ್ಟು ಆಧುನಿಕವಾಗಿ ಈ ಸನ್ಯಾಸಿ ಮುಂದುವರಿದಿದ್ದನೆಂದರೆ ಆತನಿಗೆ ಇಂಗ್ಲೀಷ್ ಪುಸ್ತಕಗಳನ್ನು ಓದಿ ತಿಳಿಯುವಷ್ಟು ಸಾಮರ್ಥ್ಯವಿತ್ತು.

ಏಳೆಂಟು ವರ್ಷಗಳ ಹಿಂದೆ ತಿರುಪತಿಗೆ ಹೋಗಿ ಹಿಂದಿರುಗದಿದ್ದ ದೊಡ್ಡಣ್ಣ ಹೆಗ್ಗಡೆಯವರ ಕಳೆಬರವನ್ನು ತೀರ್ಥಹಳ್ಳಿಯಿಂದ ಹಳೆಮನೆಗೆ ದಹನ ಸಂಸ್ಕಾರಾರ್ಥವಾಗಿ ಬೆಟ್ಟಳ್ಳಿಯ ಗಾಡಿಯಲ್ಲಿ ತರುತ್ತಾರೆ. ಆತನ ಮಡದಿ ರಂಗಮ್ಮ ದೊಡ್ಡಣ್ಣಹೆಗ್ಗಡೆಯವರ ಶವದ ಕಾಲಿಗೆ ಶಿರಸಾಷ್ಟಾಂಗ ಎರಗಿ ಅಲ್ಲೆ ಪ್ರಾಣ ಬಿಡುತ್ತಾಳೆ. ಒಲಿದ ಮನಸ್ಸು ಗಂಡನ ಬರವನ್ನು ಏಳೆಂಟು ವರ್ಷಗಳಿಂದಲೂ ಕಾದ ಪರಿತಾಪದಿಂದಾಗಿ ಪತಿಯ ಸಾವಿನಲ್ಲೂ ಪಾಲು ತೆಗೆದು ಕೊಳ್ಳುತ್ತಾಳೆ.

ಶ್ರೀ ರಾಮಕೃಷ್ಣ ಮಹಾಸಂಘದ ಮಹಾಧ್ಯಕ್ಷನಾಗಿರುವಾಗ ದೊಡ್ಡಣ್ಣ ಗಡ್ಡದಯ್ಯನಿಂದಲೇ ದೀಕ್ಷೆ ಪಡೆದು ಮಹಾಸಂಘದ ಸನ್ಯಾಸಿ ಸದಸ್ಯನಾಗುತ್ತಾನೆ ಎಂಬ

(ಮ.ಮ. ಪು. ೫೮೧). ಮಾತು ಬಂದಿದೆ. ಅಂದರೆ ಈ ದೊಡ್ಡಣ್ಣ ಕುವೆಂಪುರವರ ದೀಕ್ಷಾಗುರು ಸ್ವಾಮಿ ಶಿವಾನಂದರಾಗಿದ್ದಾರೆ. ಎಂದೂ ಅನ್ನಿಸುತ್ತದೆ. ಆದರೆ ಮುಂದೆ ಕ್ರಿ.ಶ. ೧೮೬೩ ರಲ್ಲಿ ಸ್ವಾಮೀಜಿ ತಮ್ಮ ಶಿಷ್ಯರಲ್ಲಿ ಕೆಲವರಿಗೆ ಮಂತ್ರದೀಕ್ಷೆಕೊಡಲು ನಿರ್ಧರಿಸಿದ್ದರು. ಅವರು ಸಹೋದರಿ ಕ್ರಿಸ್ಟೈನ್ ಎಂಬ ಮಹಿಳೆಯನ್ನು ಏಕಾಂತಕ್ಕೆ ಕರೆದು ತಾವು "ಪರಮನ ಪ್ರವೇಶನ ಶಕ್ತಿ" ತಿಳಿದಿದ್ದು ನಾಳೆ ದೀಕ್ಷೆ ಕೊಡುವ ಎಲ್ಲರ ಭವಿಷ್ಯ ಜೀವನದಲ್ಲಿ ಸಂಭವಿಸಲಿರುವ ಘಟನೆಗಳನ್ನು ಅವರವರಿಗೆ ಪ್ರತ್ಯೇಕವಾಗಿ ತಿಳಿಸಿರುವೆನೆನ್ನುತ್ತಾರೆ. "ನಮ್ಮ ಅತೀಂದ್ರಿಯ ಜ್ಞಾನದಿಂದ ತೀರ್ಥಹಳ್ಳಿ ಮೂಲೆಯಲ್ಲಿ ಧರ್ಮಾಂತರ ಪ್ರಹಸನ ನಡೆದಿರುವುದನ್ನು ಕಂಡುಕೊಂಡದ್ದರ ಪ್ರಸಂಗ" ತಿಳಿಸುತ್ತಾರೆ. ಕುವೆಂಪುರವರು ಒಂದು ರೀತಿ ವಿವೇಕಾನಂದರ ಅಂಶವಾಗಿ ಹುಟ್ಟಿದರೆಂಬ ನಂಬಿಕೆ ಮೂಡುತ್ತದೆ.

ಇಂದು ನಾವು ಕಾಣುವಂತೆ ಸಿನಿಮೀಯ ರೀತಿಯಲ್ಲಿ ರಂಗಮ್ಮನಿಗೆ ಸಾವು ಬಂದಿದೆ. ಗಡ್ಡದಯ್ಯನ ಮಾತಿಗೆ ಈ ಸಾವು ಬಹು ಬೇಗ ಪುಷ್ಟಿ ನೀಡಿತು. ಮುಂದೆ ಈ ಗಡ್ಡದಯ್ಯನ ಪ್ರಕಾರ ಚಿನ್ನಮ್ಮನ ಮದುವೆ ಸಿಂಬಾವಿ ಹೆಗ್ಗಡೆಯೊಂದಿಗೆ ಏರ್ಪಟ್ಟರೂ ಅದು ಮುರಿದು ಬಿದ್ದು ಮತ್ತೆ ಚಿನ್ನಮ್ಮ ತನ್ನ ಪೂರ್ವಜನ್ಮದ ಗಂಡನಾದ ಮುಕುಂದಯ್ಯನನ್ನು ಸೇರುತ್ತಾಳೆ. ಎಂಥ ಆಧ್ಯಾತ್ಮಿಕ ಅರಿವು ಆತ್ಮಗಳ ಬಗ್ಗೆ, ದೇಹಗಳ ಬಗ್ಗೆ ದೊಡ್ಡಣ್ಣನಿಗೆ ಇತ್ತು ಎಂಬುದು ಅಚ್ಚರಿ ಹುಟ್ಟಿಸುತ್ತದೆ. ಚಿನ್ನಮ್ಮನ ಹೊಟ್ಟೆಯಲ್ಲಿ ಹುಟ್ಟಿದ ಮಗುವಿನ ಬಗ್ಗೆ ರಾಮಕೃಷ್ಣ ಆಶ್ರಮದಲ್ಲಿ ನುಡಿದ ಅಶರೀರವಾಣಿ ಸತ್ಯವಾಗುತ್ತದೆ. ಹುಟ್ಟು-ಸಾವುಗಳ ಮಧ್ಯದಲ್ಲಿ ಪುನರ್ಜನ್ಮದ ಹಾಗೂ ಆತ್ಮ ಪರಮಾತ್ಮ ಸಂಬಂಧಗಳ ಚರ್ಚೆಯನ್ನು ಕಥಾ ಪಾತ್ರಗಳ ಮೂಲಕ ಜೀವಂತಗೊಳಿಸುವ ಪ್ರಯತ್ನ ತುಸು 'ಮೂಢ' ಎಂದೆನಿಸಿದರೂ ಆ ಕಾಲಘಟ್ಟಕ್ಕೆ ಹೊಂದಿಕೊಂಡು ನೋಡಿದಾಗ ಅದನ್ನು ಆ ವಾಸ್ತವಿಕ ಎಂದು ಪರಿಗಣಿಸುವ ಕಾರಣವಿಲ್ಲ. ಆಧುನಿಕತೆಯ ಹಿನ್ನೆಲೆಯಲ್ಲಿ ಅವಲೋಕಿಸುವಾಗ ಮಾತ್ರ ಇವುಗಳೆಲ್ಲ ಚರ್ಚಾರ್ಹ ಅಥವಾ ಪ್ರಶ್ನಾರ್ಹ ಎಂದೆನಿಸುತ್ತದೆ.

# ಫಲಿತ

ಆಧುನಿಕತೆ ಎಂಬುದು ನಿರಂತರವಾಗಿ ನಡೆಯುವ ಪ್ರಕ್ರಿಯೆ. ಕಾಲದಿಂದ ಕಾಲಕ್ಕೆ ಸಮಾಜ ಬದಲಾವಣೆ ಹೊಂದುತ್ತಿರುತ್ತದೆ. ನಿನ್ನೆಗೆ ಹೋಲಿಸಿದರೆ ಇಂದು ಹೊಸತು ಇಂದಿಗೆ ಹೋಲಿಸಿದರೆ ನಾಳೆ ಹೊಸತನ್ನು ಕಂಡೇ ಕಾಣುತ್ತೇವೆ. ಈ ಹೊಸತನಕ್ಕೆ ಮನುಷ್ಯನ ಆವಶ್ಯಕತೆಗಳೇ ಕಾರಣವಾಗಿರುತ್ತವೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯ ಆರಂಭದಲ್ಲೆ ದಲಿತರ ಬಂಡಾಯವನ್ನು ಕಾಣುತ್ತೇವೆ. ಹಳೆಪೈಕದವರು ಒಕ್ಕಲಿಗರನ್ನು ಯಾವುದೇ ಕಾರಣಕ್ಕೂ ಅನುಕರಿಸಕೂಡದು. ಮದುವೆ ಸಂದರ್ಭದಲ್ಲಿ ವರ ಒಕ್ಕಲಿಗರಂತೆ ಕುದುರೆಯ ಮೇಲೆ ಬರಬಾರದು ಎಂಬ ಮಾತಿಗೆ ಸೇಸ ನಾಯ್ಕ "ಅವರಿಗಿಂತ ನಾವೇನು ಕಡಮೆ? ನಮ್ಮ ಕುದುರೆ, ನಮ್ಮ ದಂಡಿಗೆ, ನಮ್ಮ ವಾದ್ಯ, ನಮ್ಮ ಬೋವಿಗಳು! ನಮ್ಮ ದುಡ್ಡು, ನಾವು ಖರ್ಚು ಮಾಡುವುದಕ್ಕೆ ಇವರದೇನು ಅಡ್ಡಿ" ಎಂದು ಹೇಳುವಲ್ಲಿ ಸಮಾನತೆಗಾಗಿ ಹೋರಾಡುವುದನ್ನು ಕಾಣುತ್ತೇವೆ.

ಆಗಿನ ಮೇಗರವಳ್ಳಿಯಲ್ಲಿ ಆಸ್ಪತ್ರೆ, ಸ್ಕೂಲು, ಷಾಪು, ಹೋಟಲು, ಮಿಲ್ಲು ಯಾವುದೂ ಇರಲಿಲ್ಲ. ಆದರೆ ಮಲೆಯಾಳಿ ಕಣ್ಣಾ ಪಂಡಿತರಿದ್ದರು. ಮಾಪಿಳ್ಳೆಯವರ ಪ್ರವೇಶವಾದ ಬಳಿಕ ಕರಿಮೀನು ಸಾಬರು ಅಂಗಡಿ ಇಟ್ಟರು. ಈ ಕಣ್ಣಾ ಪಂಡಿತರ ಶೋಷಣೆ ಮಟ್ಟವನ್ನು ಗಮನಿಸಿದರೆ ಆತ ದಲಿತರ ಗುತ್ತಿಯನ್ನೂ ಬಿಟ್ಟಿರಲಿಲ್ಲ. "ನನಗೆ ಹಣ ಬೇಡ. ಬೇಕು ಬೇಕಾದಾಗ ಒಂದೊಂದು ಕೋಳಿ ಕೊಡು, ಸಾಕು" ಎಂದು ಹೇಳುತ್ತಾನೆ. ಯಾರಿಂದ ಯಾವ ಬಗೆಯಲ್ಲಿ ತನಗೆ ಬೇಕಾದ್ದನ್ನು ಕಕ್ಕಿಸಬೇಕೆಂದು ಕೇರಳ ಮೂಲದವನಾದ ಕಣ್ಣಾ ಪಂಡಿತರಿಗೆ ಗೊತ್ತಿತ್ತು.

ಕಾನೂರು ಹೆಗ್ಗಡಿತಿಯಲ್ಲಿ ತಲೆಗೆ ಅರಳೆಣ್ಣೆ ಹಾಕಿಕೊಳ್ಳುತ್ತಿದ್ದ ರಾಮಯ್ಯ ಮೈಸೂರಿಗೆ ಹೋದ ಮೇಲೆ ತಲೆಗೆ ಪೇಟೆಯ ಪರಿಮಳಯುಕ್ತ ತೈಲ ಹಾಕಿಕೊಳ್ಳುವುದನ್ನು ಕಾಣುತ್ತೇವೆ. ಬದಲಾವಣೆಯ ಒಂದೊಂದು ಹೆಜ್ಜೆಗಳು ಆವರಿಸಿಕೊಳ್ಳುವ ಬಗೆಯೇ ಹಾಗೆ.

ಹಚ್ಚೆ ಹಾಕಿಕೊಳ್ಳುವುದು ಮಲೆಗಳಲ್ಲಿ ಮದುಮಗಳು ಕಾದಂಬರಿಯ ದೇವಮ್ಮನಿಗೆ ಇಷ್ಟ. ಅದು ಶಿವನ ಜಡೆ. ಮುತ್ತೈದೆಯರಿಗೆ ಶ್ರೇಯಸ್ಸು ಎಂದು ನಂಬಿದರೆ ಕಾನೂರು ಹೆಗ್ಗಡಿತಿಯಲ್ಲಿ ಸೀತೆ ಹಚ್ಚೆ ಹಾಕಿಕೊಳ್ಳುವುದು ಅನಾಗರಿಕತೆಯ ಸಂಕೇತ ಎಂದು ಭಾವಿಸಿ ಆಕೆ ಹಚ್ಚೆ ಹಾಕಿಸಿಕೊಳ್ಳುವುದಿಲ್ಲ.

ಮಲೆನಾಡಿನ ಜನ ನೀಳ ಕೂದಲು ಬಿಡುತ್ತಿದ್ದರು. ಹೂವಯ್ಯ ಮೈಸೂರಿನ ವಾಸನಿಮಿತ್ತವಾಗಿ ಕ್ರಾಪು ಬಿಟ್ಟಿದ್ದಾನೆ. ವಾಸುವೂ ಸಹ ಹೂವಯ್ಯನನ್ನು ಅನುಸರಿಸಿ ಕ್ರಾಪ್ ಬಿಡುತ್ತಾನೆ. ಮಲೆಗಳಲ್ಲಿ ಮದುಮಗಳುವಿನಲ್ಲಿ ದೇವಯ್ಯನೂ ಕ್ರೈಸ್ತರ ಪ್ರಭಾವದಿಂದ ಕ್ರಾಪ್ ಬಿಡುತ್ತಿದ್ದ ಸನ್ನಿವೇಶ ಕಾಣಬಹುದು.

ಚಂದ್ರಯ್ಯಗೌಡರ ಮನೆಯ ನಾಯಿಗಳೂ ಕೂಡ (ರೂಬಿ, ಡೈಮಂಡ್, ಕೊತ್ವಾಲ ಟಾಪ್ಸಿ) ಹೊಸ ಹೆಸರುಗಳಿಂದ ರಂಜಿಸುತ್ತಿದ್ದವು. ಹೂವಯ್ಯ ತಾಯತ ಕಟ್ಟುವುದನ್ನು ವಿರೋಧಿಸುತ್ತಾನೆ. ವಾಸುವೂ ತನಗೆ ಕಟ್ಟಿದ ತಾಯತವನ್ನು ಬಿಸಾಡುತ್ತಾನೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದೇವಯ್ಯ ತನ್ನ ಮಗುವಿನ ತೊಟ್ಟಿಲಿಗೆ ಕಟ್ಟಿದ್ದ ದಾರ, ತಾಯಿತ, ನಾಣ್ಯದ ಸರಗಳನ್ನು ಕಿತ್ತು ಬಿಸಾಕುತ್ತಾನೆ. ಅವೆಲ್ಲವೂ ಮೂಡನಂಭಿಕೆಗಳು ಎಂಬುದು ಆತನ ಅಭಿಪ್ರಾಯವಾಗಿತ್ತು.

ಹೊಸ ಶಿಕ್ಷಣ ಪದ್ಧತಿ ಮಲೆನಾಡಿಗೆ ಕಾಲಿಡುತ್ತದೆ. ಇದು ಕ್ರೈಸ್ತರ ಆಗಮನದ ಪ್ರಭಾವ. ಭಗವದ್ಗೀತೆ, ಉಪನಿಷತ್‌ಗಳ ಬದಲಿಗೆ ಇಂಗ್ಲೀಷ್ ಕಲಿಯುವುದು ಆರಂಭವಾಗುತ್ತದೆ.

ಕ್ರೈಸ್ತ ಪಾದ್ರಿ ಜೀವರತ್ನಯ್ಯ ದೇವಯ್ಯನಿಗೆಂದೇ ವಿಲಾಯಿತಿ ಬೈಸಿಕಲ್ ತಂದು ಕೊಟ್ಟಿರುತ್ತಾನೆ. ಮತ ಪ್ರಚಾರಕ್ಕೆ ಬೈಸಿಕಲ್ ಹೇಳಿ ಮಾಡಿಸಿದ ಸಾಧನವಾಗಿತ್ತು. ಹಂಸದ ಚಿತ್ರವಿರುವ ಪಾರಟನ್ ಪೆನ್, ಬೈಸಿಕಲ್‌ಗಳು ಹೊಸದಾಗಿ ಮಲೆನಾಡನ್ನು ಪ್ರವೇಶಿಸಿದ್ದವು. ಕೂಲಿಮಠಗಳಲ್ಲಿ ಕಲಿಸುತ್ತಿದ್ದ ಗದುಗಿನ ಭಾರತ, ತೊರವೆ ರಾಮಯಣ ಜೈಮಿನಿ ಭಾರತ ಒಂದೆಡೆಯಾದರೆ ಆಂಗ್ಲ ಶಾಲೆಯಲ್ಲಿ ಷೇಕ್ಸ್‌ಪಿಯರ್, ಷೆಲ್ಲಿ, ಡಾಂಟೆಯವರ ಬಗ್ಗೆ ಓದುವ ಅವಕಾಶ ನೀಡಲಾಗುತ್ತಿತ್ತು.

ಮೈಗೆ ಗಾಯವಾದಾಗ ಸೊಪ್ಪಿನರಸ ಹಾಕುತ್ತಿದ್ದ ಜನ ಈಗ ಪಾದ್ರಿ, ದೇವಯ್ಯನ ಸಹಾಯದಿಂದ ಔಷಧಿ, ಬೌರಿಂಗ್ ಪೌಡರ್ ಬಳಸತೊಡಗಿದರು. ಕಷಾಯ ಕುಡಿಯುತ್ತಿದ್ದ ಜನ ಕ್ರೈಸ್ತರ ಪ್ರವೇಶದಿಂದ 'ಕಾಫಿ' ಕುಡಿಯಲು ಶುರುಮಾಡಿದ್ದರು. ಹಳ್ಳಿಗೆ ಕಾಫಿ ಹೋಟೆಲ್ ಕೂಡ ಪ್ರವೇಶಮಾಡಿತು.

ಇದುವರೆಗೂ ಕಾದಂಬರಿಗಳಲ್ಲಿ ಯಾವ ದಿನಾಂಕವೂ ಪ್ರಕಟಗೊಳ್ಳುತ್ತಿರಲಿಲ್ಲ. ' ೧೮೬೩ನೆಯ ಇಸವಿ ಸೆಪ್ಟಂಬರ ೧೧ನೇ ತೇದಿ ಎಂದು ಕುವೆಂಪು ದಿನಾಂಕವನ್ನು ದಾಖಲಿಸಿಬಿಡುತ್ತಾರೆ. ದೇವಯ್ಯ ಮನೆಗೆ ಗಡಿಯಾರವನ್ನು ತಂದು ನೇತುಹಾಕುತ್ತಾನೆ. ಆ ಕಾಲಕ್ಕೆ ಅದು ನವನವೀನ ಸಾಧನ (ಪು ೧೯೭).

ದೇವಯ್ಯನ ಕೆಂಪುನಾಮು, ಕಿವಿಯ ಒಂಟಿ, ಓಲೆ ಮಾಯವಾಗುತ್ತದೆ. (ಪು ೯೮) ಪಾದ್ರಿಯಿಂದಾಗಿ ತೀರ್ಥಹಳ್ಳಿಯಲ್ಲಿ ಡಾಕ್ಟರ್, ಅಮಲ್ದಾರರು, ಪೋಲೀಸ್, ಪೋಸ್ಟಾಫೀಸ್ ಕಾಫಿ –ಹೋಟೆಲ್ ಪ್ರವೇಶಿಸಿದೆ. ಧರ್ಮದ ಹೆಸರಿನಲ್ಲಿ ಶುಚಿತ್ವಕ್ಕೆ ಮನ್ನಣೆ ನೀಡಲಾಗಿದೆ. ಗಣಪನ ಪೂಜೆಗೆ ಗಡ್ಡದಯ್ಯ ಬರುವುದು ಅವನನ್ನು ಪಾದ್ರಿಗೆ ಹೋಲಿಸುವುದು. ಇದು ಸಂಸ್ಕೃತಿಯ ಸಮೀಕರಣಕ್ಕೆ ಉದಾಹರಣೆಯಾಗಿದೆ.

ಮುಸ್ಲಿಂ ಪ್ರವೇಶದಿಂದಾಗಿ 'ಹೊನ್ನಾಳಿ ಹೊಡೆತ' ಆರಂಭವಾಯಿತು. ಇಲ್ಲಿ ಮಂಜಭಟ್ಟರ ಆರ್ಥಿಕ ಮುಂದಾಳತ್ವವನ್ನೂ ಕಾಣಬಹುದು. ಕರೀಂಸಾಬು, ಅಜ್ಜಿಸಾಬು, ಪುಡಿಸಾಬು, ಲುಂಗಿಸಾಬು, ಇಜಾರದ ಸಾಬು ಎಂಬ ಮುಸ್ಲಿಂಮರ ಆಕ್ರಮಣ ಮೇಲ್ವರ್ಗದವರ ಒತ್ತಾಸೆಯಿಂದ ಪ್ರಾರಂಭವಾಯಿತು. ಅವರ ಮೂಲಕ ಹರಾಮ್ ಬಾಂಚೋತ್, ಸುವರ್ ಎಂಬ ಕೆಟ್ಟ ಅನ್ಯಭಾಷಾ ಪ್ರವೇಶವೂ ಆಯಿತು. ಭಾಷೆಯ ಮೌಖಿಕ ಪರಂಪರೆಗೆ ಇಂಥ ಶಬ್ದಗಳೆಲ್ಲ ದುಷ್ಟ ಕೊಡುಗೆಗಳಾದವು.

ಹೂವಯ್ಯನ ಆದರ್ಶ ವೈಚಾರಿಕತೆಗಳನ್ನು ಕಾಣುತ್ತೇವೆ. ಹೂವಯ್ಯ ಪುರೋಹಿತರ ಸುಳ್ಳು ಬೋಧನೆ ಅರೆ ತಿಳುವಳಿಕೆಗಳನ್ನು ಪ್ರಶ್ನಿಸುವುದನ್ನು ಕಾಣುತ್ತೇವೆ. ಹೂವಯ್ಯನ ಮಾನವೀಯತೆಗೆ ಗಂಗ ಹುಡುಗನ ಹಣ್ಣು ಕದಿಯುವ ಪ್ರಸಂಗ, ಬೈರನಿಗೆ ಪಡಿಕೊಡಿಸಿದ ಪ್ರಸಂಗಗಳು ಸಾಕ್ಷಿಯಾಗಿವೆ.

ಚಂದ್ರೇ ಗೌಡರಂತೆ ವ್ಯಕ್ತಿ ರೇಂಜರ್ ಆಫೀಸಿಗೆ ಹೂಗುವುದು ದರ್ಪದ ಆಳ್ವಿಕೆ ನಡೆಸಿದ ಚಂದ್ರೇಗೌಡರು ಹೂವಯ್ಯನ ಪ್ರಭಾವದಿಂದ ಮಾನವೀಯತೆಯು ಕಂಬನಿ ಮಿಡಿಯುತ್ತಾರೆ.

ಸುಶಿಕ್ಷಿತ ಹೆಣ್ಣು ಸೀತೆ ತನ್ನ ಅಭಿಪ್ರಾಯವನ್ನು ಗೋಡೆ ಮೇಲೆ ಬರೆದು ತನ್ನ ಭಾವನೆಯನ್ನು ಹೊರಗೆಡವುತ್ತಾಳೆ. ಮನೆ ಪಾಲಾಗುವ ಸನ್ನಿವೇಶದಲ್ಲಿ ಹೂವಯ್ಯ ಪಿತ್ರಾರ್ಜಿತ ಆಸ್ತಿಗೂ ಸ್ವಯಾರ್ಜಿತ ಆಸ್ತಿಗೂ ಇರುವ ಸಂಬಂಧಗಳನ್ನು ತಿಳಿಸುತ್ತಾನೆ. ಆಲೋಚನೆ ತೀರ ಆಧುನಿಕವಾದುದೂ ಆಗಿತ್ತು.

ಆ ಊರಿಗೆ ಪೋಲೀಸ್ ಪ್ರವೇಶದಿಂದ ಜನ ನಡುಗುವ ಸನ್ನಿವೇಶ ಬರುತ್ತದೆ. ಲಕ್ಷ್ಮೀ, ವಾಸು, ಆಧುನಿಕ ಸಂದರ್ಭಗಳಿಗೆ ಸ್ಪಂದಿಸುವುದನ್ನು ಹತ್ತು ವರ್ಷಗಳಾದ ಮೇಲೆ ದೃಶ್ಯದಲ್ಲಿ ಕಾಣಬಹುದು.

ಕ್ರೈಸ್ತರ ಪ್ರಭಾವದಿಂದ ಮಲೆನಾಡಿಗೆ ಬೈಸಿಕಲ್ ಪ್ರವೇಶ, ಬೈಸಿಕಲ್ ಕಲಿಸುವ ರೀತಿ, ಉದ್ದೇಶಗಳನ್ನು ಗುರುತಿಸಬಹುದು. ಕಾಫಿ ಪ್ರವೇಶದಿಂದ ಹಿಂದೆ ಇದ್ದ ಮಲೆನಾಡಿನ ಆತಿಥ್ಯದ ಬಗ್ಗೆ ತಿಳಿಯಬಹುದು. ದೇವಯ್ಯನ ಬದಲಾವಣೆ ಮತಾಂತರದ ಬಗ್ಗೆ ದೇವಯ್ಯನಿಗಿದ್ದ ಅಭಿಪ್ರಾಯ ವ್ಯಕ್ತವಾಗುತ್ತದೆ. 'ಕಾಮ' ಕೇಂದ್ರಿತವಾದ ಕಾದಂಬರಿ ಮಲೆಗಳಲ್ಲಿ ಮದುಮಗಳುವಿನಲ್ಲಿ ಮಲೆನಾಡಿನ ಜನರ ಅಂತರ್ ಲೈಂಗಿಕ ಸಂಬಂಧಗಳ ಬಗ್ಗೆ ತಿಳಿಸಲಾಗಿದೆ. 'ಉಂಗುರದ' ಸಂದರ್ಭ ಸಿಕ್ಕಲೆಲ್ಲಾ ಅವಗಡಕ್ಕೆ ಕಾರಣವಾಗುವುದನ್ನು ಕಾಣುತ್ತೇವೆ.

ಬೇಟೆಯಲ್ಲಿ ಹೊಸ ಹೊಸ ವಿಧದ ಒಂಟಿ ನಳಿಕೆ, ಜೋಡಿ ನಳಿಕೆ ಕೋವಿಗಳ ಪ್ರವೇಶ ಹಾಗೂ ಮಿಡಿಬಲೆ ದಡಿಗ ಬಲೆಗಳ ಪರಿಚಯವಾಗುತ್ತದೆ.

ಕ್ರೈಸ್ತರ ಧರ್ಮ ಪ್ರಚಾರ, ಶಿಕ್ಷಣ ವ್ಯವಸ್ಥೆ ಬಗ್ಗೆ ಕಾದಂಬರಿಗಳು ಬೆಳಕು ಚಲ್ಲುತ್ತದೆ. ವಿವಾಹೇತರ ಸಂಬಂಧ, ಪುನರ್ವಿವಾಹ ಇತ್ಯಾದಿಗಳಿಗೆ ಕ್ರೈಸ್ತ ಧರ್ಮ ಉತ್ತೇಜನ ಕೊಡುವುದೂ ಕಂಡು ಬರುತ್ತದೆ. ಹೀಗೆ ಅನೇಕ ಬಗೆಯ ಆಧುನಿಕ ಅಂಶಗಳನ್ನು ಜೊತೆಗೂಡಿಕೊಂಡು ಹುಟ್ಟಿಕೊಂಡ ಎರಡು ಕಾದಂಬರಿಗಳು ಆಧುನಿಕತೆಯ ವಿವಿಧ ಸತ್ವಗಳನ್ನು ವಿವಿಧ ಸ್ತರಗಳಲ್ಲಿ ಬಿಂಬಿಸುತ್ತವೆ.

ವಿವಾಹ ವಿಚ್ಛೇದನದ ಬಗೆಗಿನ ಕಾನೂನುಗಳ ಪರಿಚಯ ಸಿಗುತ್ತದೆ. ಬ್ರಾಹ್ಮಣಶಾಹಿ ವಿರೋಧವನ್ನು ಹೂವಯ್ಯ ದೇವಯ್ಯ ಇಬ್ಬರೂ ವ್ಯಕ್ತ ಪಡಿಸುವುದು ಕಾಣುತ್ತೇವೆ. ಚಿನ್ನಮ್ಮ, ತಿಮ್ಮಿಯರು, ಪ್ರೀತಿಸಿದವರನ್ನು ಪಡೆಯಲು ಓಡಿ ಹೋಗುವುದನ್ನು ನೋಡಬಹುದು ಒಟ್ಟಾರೆ ಮಲೆನಾಡಿಗೆ ಅಂದಿನ ಬದಲಾವಣೆ ನಾಂದಿಯಾಗುತ್ತದೆ.

ಚಿನ್ನಯ್ಯ, ಪುಟ್ಟಮ್ಮರ ಮಗುವಿಗೆ 'ಕರಿಯ' ಎಂಬ ಹೆಸರನ್ನು ಸೂಚಿಸಿದ ಪುರೋಹಿತರನ್ನು ಚಿನ್ನಯ್ಯ ಟೀಕಿಸುತ್ತಾನೆ. "ಈ ಹಾರುವರ ದೆಸೆಯಿಂದ ನಮಗೆ ಉಳಿಗಾಲವಿಲ್ಲ. ವಿದ್ಯೆ , ಬುದ್ಧಿ ಚೆನ್ನಾಗಿ ಕೊಡಲಿಲ್ಲವಣ್ಣ. ಹೋಗಲಿ ಒಳ್ಳೊಳ್ಳೆ ಹೆಸರುಗಳನ್ನಾದರೂ ಇಟ್ಟುಕೊಡಬಾರದೆ ಅದಕ್ಕೂ ಹೊಟ್ಟೆಕಿಚ್ಚು ಅಂತ ಕಾಣ್ತದೆ. ಕರಿಯ, ತಿಮ್ಮ, ಕಾಳ, ಬೋಳ ಇವೆ ನಮ್ಮ ಪಾಲಿಗೆ" (ಕಾ.ಹೆ. ಪು ೬೨೦) ಪುರೋಹಿತಶಾಹಿಯನ್ನು ವಿರೋಧಿಸಲು ಮಗುವಿಗೆ ರಮೇಶ ಎಂದು ಹೆಸರಿಡಲಾಗುತ್ತದೆ. ಇದು ಸಮಾಜದ ಬದಲಾವಣೆಗೆ ಕನ್ನಡಿ ಹಿಡಿದಂತೆ. ಶತಮಾನಗಳಿಂದ ಮಾತುಕಳೆದುಕೊಂಡವರು ಮಾತನ್ನು ಪಡೆದುಕೊಳ್ಳುತ್ತಡಗಿದ್ದು, ಪ್ರತಿರೋಧ ಒಡ್ಡ ತೊಡಗಿದ್ದು ಇಲ್ಲಿ ಕಂಡುಬರುತ್ತದೆ.

ಇಂಡಿಯಾದಲ್ಲಿ ಆ ಕಾಲಕ್ಕೆ ಪಶ್ಚಿಮ ರಾಷ್ಟ್ರಗಳು ಅಭಿವೃದ್ಧಿ ಪಡೆದ ರಾಷ್ಟ್ರಗಳು ಎಂಬ ಕಲ್ಪನೆ ಹಬ್ಬಿತ್ತು. ಇಲ್ಲಿಯೂ ಅಂಥ ಐಹಿಕ– ಸಾಮಾಜಿಕ ಅಭಿವೃದ್ಧಿಯಾಗಬೇಕೆಂಬ ಹಂಬಲ ಹುಟ್ಟಿತ್ತು. ಬ್ರಿಟೀಷರು ಇಲ್ಲಿ ಅಂಥ ಅಭಿವೃದ್ಧಿಯ ಪ್ರಕ್ರಿಯೆಯನ್ನು ಪ್ರಾರಂಭಿಸಿದ್ದರು ಕೂಡ. ಕುವೆಂಪು ಐಹಿಕ ಅಭಿವೃದ್ಧಿಯನ್ನು ಬಲವಾಗಿ ಸಮರ್ಥಿಸಿದವರೆ. ಕಾದಂಬರಿಯ ಕೊನೆಯಲ್ಲಿ ಹತ್ತು ವರ್ಷಗಳ ಅವಧಿಯಲ್ಲಿ ಕಾನೂರಿನಲ್ಲಾದ ಅಭಿವೃದ್ಧಿಯನ್ನು ಎತ್ತಿ ಹೇಳಲಾಗಿದೆ ಎಂಬುದನ್ನು ಗಮನಿಸಬೇಕು. ಆದರೆ ಇಂಥ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಮುದಾಯ ನೈತಿಕ ಆಧಃಪತನವನ್ನು ಕಂಡುಕೊಂಡದ್ದೂ ಇದೆ. ಒಂದರ್ಥದಲ್ಲಿ ಹೇಳಬಹುದಾದರೆ ಅದೆಲ್ಲ ಸುಧಾರಣೆಯ ಬೈಪ್ರೊಡಕ್ಟುಗಳು ಆ ಬಗ್ಗೆ ಕುವೆಂಪು ತೀವ್ರ ಆತಂಕ ಕಾಳಜಿಗಳನ್ನುಳ್ಳವರಾಗಿದ್ದರು. ಇಂಡಿಯಾದಲ್ಲಿ ಆಗುತ್ತಿದ್ದ, ಇನ್ನೂ ತುಂಬಾ ಆಗಬೇಕಾಗಿದ್ದ ಐಹಿಕ ಅಭಿವೃದ್ಧಿಯನ್ನೂ ಬಲವಾಗಿ ಸಮರ್ಥಿಸುವುದರ ಜತೆಗೆ, ಅಂಥ ಚಳುವಳಿಯು ತಾಳಿಕೊಳ್ಳಬೇಕಾದ ಕಟ್ಟೆಚ್ಚರವನ್ನೂ ಅದಕ್ಕೆ ಅಗತ್ಯವಾಗುವ ಆದರ್ಶ ನಾಯಕತ್ವವನ್ನೂ ಕಾದಂಬರಿಯು ಸುಬ್ಬಮ್ಮನ ಕಥೆಯ ಮೂಲಕ ಹೇಳುತ್ತದೆ. ಮುಂದೆ ೧೯೫೭ರಲ್ಲಿ ನಮ್ಮ ರಾಜಕಾರಣಿ ಚಿಂತಕ ರಾಮ ಮನೋಹರ ಲೊಹಿಯಾರು, 'a call to truth, work, resistance and character building' ಎಂಬ ತಮ್ಮ ದೀರ್ಘ ಲೇಖನದಲ್ಲಿ ಇದೇ ಸಂಗತಿಯನ್ನು ಬಲು ಆತಂಕದಿಂದ ವೀಕ್ಷಿಸಿ ಎಚ್ಚರಿಸುತ್ತಾರೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಶೂದ್ರರಲ್ಲಿ ಮೇಲ್‌ಸ್ಥರದವರಾದ ಒಕ್ಕಲಿಗ ಭೂಮಾಲಿಕರ ಮತ್ತು ಶೂದ್ರರಲ್ಲಿ ಕೆಳಸ್ಥರದವರಾದ ಅಸ್ಪೃಶ್ಯ ದುಡಿಯುವ ವರ್ಗದ ಅರ್ಥಾತ್ ಜೀತದಾಳುಗಳ ನಡುವಿನ ಅಂತರ ಮತ್ತು ಘರ್ಷಣೆಗಳು ಪ್ರಕಟಗೊಳ್ಳುತ್ತದೆ. ಲುಂಗಿಸಾಬು, ಅಜ್ಜಿಸಾಬು, ಇಜಾರದ ಸಾಬು ಮುಂತಾದ ಮನುಷ್ಯತ್ವವಿಲ್ಲದ ಜನರನ್ನು ಬೆನ್ನಿಗಿಟ್ಟುಕೊಂಡು ಅವರ ಮೂಲಕ ತಪ್ಪು ಮಾಡಿದ ಅಥವಾ ಬಂಡೆದ್ದ ಜೀತದಾಳುಗಳನ್ನು ಶಿಕ್ಷಿಸುತ್ತಿದ್ದ ರೀತಿ ಮನ ಮಿಡಿಯುತ್ತದೆ. 'ಸಣ್ಣಬೀರ'ನಿಗೆ ಸಾಬು ಹೊಡೆಯುವ ಪ್ರಸಂಗ ಹೃದಯ ವಿದ್ರಾವಕ. ಇದಕ್ಕೆ ಪ್ರತಿಯಾಗಿ ಗುತ್ತಿ ಮುಂದೊಂದು ದಿನ ಸಾಬುವಿನ ಮೇಲೆ ಹಲ್ಲೆಮಾಡಿ ತನ್ನ ಪ್ರತಿಭಟನೆ ತೋರುತ್ತಾನೆ. ಇಲ್ಲಿ ಬರುವ ಕಣ್ಣಾ ಪಂಡಿತರು ಹುಡುಗಿಯನ್ನು ಒಲಿಸಿಕೊಳ್ಳಲು ಗುತ್ತಿಗೆ ತಾಯಿತಕೊಟ್ಟದ್ದು ಮಾತ್ರವಲ್ಲದೆ ಅವನ ಪ್ರತಿಸ್ಪರ್ಧಿಯಾದ ಬಚ್ಚನಿಗೂ ತಾಯಿತ ಕೊಡುತ್ತಾನೆ. ಇದನ್ನು ವ್ಯಂಗ್ಯವಾಗಿ ಗುತ್ತಿಯ ಜೊತೆ ಹೇಳಿ ನಗುವಾಗಿನ ತಿಮ್ಮಿಯ ಧ್ವನಿ ಈ ತಾಯಿತಗಳ ನಿರುಪಯುಕ್ತತೆಯನ್ನು ಪ್ರಕಟಿಸುತ್ತದೆ.

# ಅನುಬಂಧ

ಕುವೆಂಪುರವರು ಜಾತಿ ಧರ್ಮವನ್ನು ಮೀರಿದವರು. ದೇಜಗೌರವರು ಕುವೆಂಪುರವರ ೧೫.೧೨.೮೩ರ ಸಂದರ್ಶನದಲ್ಲಿ ದಾಖಲಿಸಿದ್ದಾರೆ: "ನನಗೆ ಯಾವ ಮತ ಗೋಜೂ ಇಲ್ಲ. ನನ್ನದು ಮನುಜಮತ ವಿಶ್ವಪಥ, ನಾನು ಹಿಂದೂವಲ್ಲ. ಮಾನವ ಮತವನ್ನು ತೊರೆದು ಅಧ್ಯಾತ್ಮ ಪಥವನ್ನು ಸ್ವೀಕರಿಸಿದ ಪ್ರತಿಯೊಬ್ಬ ವ್ಯಕ್ತಿಯೂ ವಿಶ್ವ ಮಾನವನಾಗುತ್ತಾನೆ. (ಪು. ೫೦ ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ ಸಾಮಾಜಿಕ ನಿಷ್ಠೆ. ಕೋ. ಚನ್ನಬಸಪ್ಪ).

ಹೀಗೆ ಕುವೆಂಪುರವರು ಎಲ್ಲ ಜಾತಿಯನ್ನೂ ಬಿಟ್ಟವರು ಯಾವ ಜಾತಿಗೂ ಸೇರದವರು. ಬಸವಣ್ಣ 'ಆನು ಹಾರುವನೆಂದರೆ ಕೂಡಲ ಸಂಗಮ ನಗುವನಯ್ಯಾ' ಎಂದಂತೆ ಕುವೆಂಪು ಆನು ಹಿಂದುವೆಂದರೆ, ಒಕ್ಕಲಿಗನೆಂದರೆ ಜನರು ನಗುವರಯ್ಯಾ ಎಂದು ಉದ್ಗಾರ ತೆಗೆಯಬಹುದು.

ಪುರೋಹಿತಶಾಹಿ ಇಡೀ ಮಲೆನಾಡಿನಲ್ಲಷ್ಟೇ ಅಲ್ಲ ಇಡೀ ದೇಶವನ್ನೇ ವ್ಯಾಪಿಸಿದ ರೋಗವಾಗಿದೆ. "ಪೌರೋಹಿತ್ಯಶಾಹಿ ತನ್ನ ಸ್ವಭಾವದಲ್ಲಿಯೇ ಕ್ರೂರ ಮತ್ತು ಹೃದಯಹೀನ. ಆದ್ದರಿಂದ ಎಲ್ಲಿ ಪೌರೋಹಿತ್ಯಶಾಹಿ ತಲೆ ಎತ್ತುವುದೋ ಅಲ್ಲಿ ಧರ್ಮ ಅಧಃಪತನವಾಗುತ್ತದೆ. ವಿಶೇಷ ಸೌಲಭ್ಯಗಳ ಭಾವನೆ ಉಂಟಾಗುವ ಮುನ್ನ ಧರ್ಮ ಬರುವುದೇ ಇಲ್ಲ." (ಶ್ರೀ ಸ್ವಾಮಿ ವಿವೇಕಾನಂದರು ಹಿಂದು ಸನಾತನವಾದಿಯೇ ಕೋ. ಚೆನ್ನಬಸಪ್ಪ, ನವಕರ್ನಾಟಕ, ಪ್ರಕಾಶನ ಪು. ೪೬) (೨೦೦೩)

ವಸಾಹತುಶಾಹಿಯಿಂದ ಕ್ರೈಸ್ತ ಮಿಷಿನರಿಗಳ ಪ್ರಭಾವ ಮಲೆನಾಡಿನ ಮೇಲೆ ಎಷ್ಟೆಲ್ಲಾ ಆಯಿತು. ಎಂದರೆ ಮಲೆನಾಡಿನ ಗೌಡರುಗಳಿಗೆ ಆಧುನಿಕ ಕಾಲದಲ್ಲಿ– ಆಧುನಿಕ ಕಾಲವೇ ಆದ್ದರಿಂದ ಸ್ವಲ್ಪ ಪ್ರಯೋಜನವಾದದ್ದೂ ಇದೆ. ಪಾದ್ರಿಗಳ ಸ್ನೇಹದಿಂದ ಗೌಡರುಗಳಿಗೆ

ಒದಗುತ್ತಿದ್ದ ಸಹಾಯವೆಂದರೆ ಹಳೆಯ ರಾಜ್ಯಗಳಳಿದು, ಬ್ರಿಟೀಷ್ ಚಕ್ರಾಧಿಪತ್ಯ ಕಾಲೂರುತ್ತಿದ್ದ ಆ ಕಾಲದಲ್ಲಿ ಹೊಸ ಕಾನೂನುಗಳು, ಹೊಸ ಹೆಸರಿನ ಅಧಿಕಾರಿಗಳು, ಹೊಸ ಹೊಸ ರೂಲೀಸುಗಳು ಜಾರಿಗೆ ಬರುತ್ತಿದ್ದುದರಿಂದ ಅವನ್ನೆಲ್ಲ ತಕ್ಕಮಟ್ಟಿಗೆ ತಿಳಿದಿದ್ದ ಆ ಪಾದ್ರಿ ಸರಕಾರದ ವ್ಯವಹಾರಗಳಲ್ಲಿ ಅವರಿಗೆ ನೆರವು ನೀಡುತ್ತಿದ್ದರು. ಹಳ್ಳಿಯವರು ತೀರ್ಥಹಳ್ಳಿಗೆ ಹೋದಾಗ ಆಸ್ಪತ್ರೆ, ಡಾಕ್ಟರ್, ಅಮಲ್ದಾರರು, ಪೋಲೀಸಿನವರು, ಪೋಸ್ಟಾಫೀಸು, ಕಾಫಿ ಹೋಟೆಲ್, ಇಸ್ಕೂಲು ಮುಂತಾದ ತಾವು ಹಿಂದೆಂದೂ ಕಾಣದ – ಕೇಳದಿದ್ದ ಭಾಷೆಯ ಹೆಸರುಗಳಿಗೆ ದಿಗಿಲುಪಟ್ಟುಕೊಳ್ಳುತ್ತಿದ್ದಾಗ ಪಾದ್ರಿಯಿಂದ ಅವರಿಗೆ ತುಂಬಾ ಉಪಕಾರವಾಗುತ್ತಿತ್ತು. (ಕುವೆಂಪು ಕಾದಂಬರಿಯಲ್ಲಿ ಆಧುನಿಕ ಪ್ರಕ್ರಿಯೆ ಡಾ। ಎಸ್. ಚಂದ್ರಶೇಖರ್ ಪು. ೩೧).

ಗ್ರಾಮೀಣ ಸಮಾಜವನ್ನು ತೀರಾಕಲಕಿಬಿಟ್ಟಿರುವುದೆಂದರೆ ವಸಾಹತುಶಾಹಿ ಆಧುನಿಕ ಸರ್ಕಾರವೇ ವಿಶೇಷವಾಗಿ ಕಾಡಿನ ಬಗ್ಗೆ, ಸಾಮಾಜಿಕ ಸಂಬಂಧಗಳ ಬಗ್ಗೆ ಆ ಸರ್ಕಾರ ಮಾಡಿದ ಕಾನೂನುಗಳು ಗ್ರಾಮೀಣ ಪ್ರದೇಶಗಳಲ್ಲಿ ಕಳ್ಳತನ, ಸುಳ್ಳುತನ, ದಗಲುಬಾಜಿ, ಜೂಜು ಹಾದರಗಳನ್ನು ಹುಟ್ಟುಹಾಕಿವೆ. ಸರ್ಕಾರದ ಹೆಂಡ ಸಾರಾಯಿಗಳ ಮೇಲಿನ ಮತ್ತು ಕಾಡು ಮರಗಳ ಮೇಲಿನ ದಿಗ್ಬಂಧನಗಳಂತೂ ಎಲ್ಲಕಡೆ ಕಳ್ಳರನ್ನೂ –ಸುಳ್ಳರನ್ನೂ ಸೃಷ್ಟಿಸಿವೆ. ಅಸ್ಪೃಶ್ಯ ಬೇಲರ ಬೈರ ಮರಕಟ್ಟುವುದು ಆಧುನಿಕತೆಗೆ ಪಾದಾರ್ಪಣೆ ಮಾಡುತ್ತಿದ್ದ ಮತ್ತು ಪ್ರಭುತ್ವದ ಅಧಿಕಾರ ಸ್ಥಿತ್ಯಂತರಗೊಳ್ಳುತ್ತಿದ್ದುದರ ಪರಿಣಾಮ. ಹಾಗೆಯೇ ಅದು ವರಮಾನ ಉಳ್ಳ ಕಸುಬನ್ನೂ, ಜಾತಿ ಕಟ್ಟಳೆಯನ್ನೂ ಧಿಕ್ಕರಿಸಿ ಮಾಡುವ ಕಾರ್ಯವೂ ಆಗುತ್ತದೆ. (ಕಾ.ಹೆ. ನಾಲ್ಕನೇ ಮುದ್ರಣ, ಪು. ೧೦೦ ಮತ್ತು ೫೧).

ಇಡೀ ವ್ಯವಸ್ಥೆ ಹೊಸ ಧರ್ಮದ ಮುಖಾಂತರ ಎಷ್ಟು ಒಳಿತನ್ನು ಕಂಡಿದೆ ಅಷ್ಟೂ ಕೆಡುಕನ್ನು ಅನುಭವಿಸುತ್ತಿದೆ.

## ಪರಾಮರ್ಶನ ಗ್ರಂಥಗಳು


೧) ಅಣ್ಣನ ನೆನಪು–ಕೆ.ಪಿ. ಪೂರ್ಣಚಂದ್ರ ತೇಜಸ್ವಿ–ಪುಸ್ತಕ ಪ್ರಕಾಶನ ೧೯೯೬

೨) ಕನ್ನಡ ಕೈ ದೀವಿಗೆ –ಡಾ॥ ಪ್ರೀತಿ ಶುಭಚಂದ್ರ (ವಿವೇಕ ಪ್ರಕಾಶನ ೨೦೦೭)

೩) ಕುವೆಂಪುಗೆ ಪುಟ್ಟ ಕನ್ನಡಿ – ಕೆ.ವಿ.ಸುಬ್ಬಣ್ಣ (೧೯೯೫, ಕರ್ನಾಟಕ ಸಾಹಿತ್ಯ ಅಕಾಡೆಮಿ)

೪) ಕುವೆಂಪು ವಿಚಾರ ದರ್ಶನ –ಕನ್ನಡ ಸಂಘರ್ಷ ಸಮಿತಿ ಪ್ರಕಾಶನ ೧೯೮೯

೫) ಕುವೆಂಪು ಕಾದಂಬರಿಗಳ ವಿಮರ್ಶೆ–ಪರಿಸರ
(ಡಾ। ಗುರುಪಾದ ಮರಿಗುದ್ದಿ)

೬) ಕುವೆಂಪು ಸಾಹಿತ್ಯದಲ್ಲಿ ವೈಚಾರಿಕತೆ ಸಾಮಾಜಿಕ ನಿಷ್ಠೆ
(ಕೋ.ಚೆನ್ನಬಸಪ್ಪ, ನವಕರ್ನಾಟಕ ಪ್ರಕಾಶನ ೨೦೦೬)

೭) ಕುವೆಂಪು ದರ್ಶನ ಸಂಪುಟ ೩ ದೇ.ಜ.ಗೌ ನಿರ್ದೇಶಕರು ಪ್ರಸಾರಾಂಗ
ಕನ್ನಡ ವಿಶ್ವ ವಿದ್ಯಾಲಯ ಹಂಪಿ

೮) ಕುವೆಂಪು ಒಂದು ಪುನರನ್ವೇಷಣೆ ಡಿ.ಎಸ್. ನಾಗಭೂಷಣ
ಲೋಹಿಯಾ ಪ್ರಕಾಶನ ಬಳ್ಳಾರಿ

೯) ಕರ್ನಾಟಕ ಕಾದಂಬರಿ– ನಾಗವರ್ಮ, ಸಂಪಾದಕರು ಕೆ.ವಿ. ಪುಟ್ಟಪ್ಪ ೧೯೭೫

೧೦) ಗಂಗೋತ್ರಿ–ಕುವೆಂಪು ಅಭಿನಂದನಾ ಗ್ರಂಥ ೧೯೬೮ ಗೀತಾಬುಕ್ ಹೌಸ್ ಬೆಂಗಳೂರು

೧೧) ಚೋಮನದುಡಿ– ಶಿವರಾಮ ಕಾರಂತ
(ಕಾದಂಬರಿ ಎಸ್.ಬಿ.ಎಸ್. ಪಬ್ಲಿಷರ್ಸ್, ಡಿಸ್ಟ್ರಿಬ್ಯೂಟರ್ಸ್ – ೧೯೯೨)

೧೨) ಮಲೆನಾಡಿನ ಚಿತ್ರಗಳು–ಕುವೆಂಪು ೯೦ (ಸಿ. ನಾಗಣ್ಣ ಒಂದು ಪುನರ್‌ವೀಕ್ಷಣೆ)

೧೩) ವಿಚಾರಕ್ರಾಂತಿಗೆ ಆಹ್ವಾನ–ಕುವೆಂಪು, ಉದಯ ಪ್ರಕಾಶನ ೨೦೦೯

೧೪) ರಸಋಷಿ (ಮಂಗಳ ಗಂಗೋತ್ರಿ ಮಂಗಳೂರು ೧೯೭೨)

೧೫) ನಿರುಕ್ತ –ಡಾ. ಎಲ್.ಸಿ.ಸುಮಿತ್ರಾ, ಸಿವಿ.ಜಿ ಪಬ್ಲಿಕೇಶನ್ ಬೆಂಗಳೂರು ೨೦೦೪)

೧೬) ಶೂದ್ರ– ಕುವೆಂಪು ೯೦ (ಒಂದು ಸಾಂಸ್ಕೃತಿಕ ನೆನಪು ೧೯೯೫)

೧೭) ಸಂಸ್ಕಾರ– ಅನಂತಮೂರ್ತಿ ಯು.ಆರ್. (ಕಾದಂಬರಿ)
(ಅಕ್ಷರ ಪ್ರಕಾಶನ ಹೆಗ್ಗೋಡು (ಸಾಗರ ೧೯೯೫)

೧೮) ಸಾಲು ದೀಪಗಳು (ಕರ್ನಾಟಕ ಸಾಹಿತ್ಯ ಅಕಾಡೆಮಿ–ಬೆಂಗಳೂರು)

೧೯) ವಿಮರ್ಶೆಯ ವಿನಯ (ಕೀರ್ತಿನಾಥ ಕುರ್ತುಕೋಟಿ ಮನೋಹರ
ಗ್ರಂಥಮಾಲೆ ಧಾರವಾಡ)

೨೦) ಕರ್ವಾಲೋ–ಪೂರ್ಣಚಂದ್ರ ತೇಜಸ್ವಿ (ಪುಸ್ತಕ ಪ್ರಕಾಶನ ೧೯೮೭)

## ಬಿಡಿ ಲೇಖನಗಳು

– ಶ್ರೀಕೃಷ್ಣ ಆಲನಹಳ್ಳಿ

– ಕುವೆಂಪು ಸಾಹಿತ್ಯ ಸಂಧಾನ – ಡಾ। ಸಿ.ಪಿ. ಕೃಷ್ಣಕುಮಾರ್

– ಕುವೆಂಪು ಕಾದಂಬರಿಯಲ್ಲಿ ದಲಿತ ಜೀವನ – ಬಿ. ಕೃಷ್ಣಪ್ಪ

– ಲೇಖಕನ ಸಂಯಮ–ರಹಮತ್ ತರೀಕೆರೆ

– ದೇವರಹೆಣ –ಕುಂ. ವೀರಭದ್ರಪ್ಪ

– ಒಂದು ಸ್ತ್ರೀ ಓದು – ಸುಮಿತ್ರಾಬಾಯಿ

– 'ಕರ್ನಾಟಕ ಶಾಕುಂತಲ– ಬಸವಪ್ಪ ಶಾಸ್ತ್ರೀ

